# ಮಾಂದಳಿರು

ಆಚಾರ್ಯ

ಎಂ. ಹಿರಿಯಣ್ಣನವರ

ಮುನ್ನುಡಿಯೊಡನೆ

ಪು. ತಿ. ನರಸಿಂಹಾಚಾರ್

# ಮುನ್ನುಡಿ

ಈ ಗ್ರಂಥಕರ್ತರನ್ನು ನಾನು ಅವರ ವಿದ್ಯಾರ್ಥಿದೆಶೆಯಲ್ಲಿ ಚೆನ್ನಾಗಿ ಬಲ್ಲೆನು. ಆದರೆ ಆಗ ಅವರ ಸೌಶೀಲ್ಯ, ಬುದ್ಧಿಕುಶಲತೆ ಇವನ್ನು ಮಾತ್ರ ಅರಿತಿದ್ದೆನೇ ಹೊರತು ಅವರಲ್ಲಿದ್ದ ಕವಿತಾ ಸಾಮರ್ಥ್ಯವನ್ನು ಸ್ವಲ್ಪವೂ ತಿಳಿದಿರಲಿಲ್ಲ. ಈಚೆಗೆ ಅವರು ಆಗಿಂದಾಗ್ಗೆ ರಚಿಸುತ್ತಿರುವ ಗೀತೆಗಳನ್ನು ಓದಿ, ಒಂದೊಂದು ವೇಳೆ ಇತರರಿಗೂ ಓದಿಹೇಳಿ, ಬಹಳವಾಗಿ ಸಂತೋಷಪಡುತ್ತಿದ್ದೇನೆ. ಅಂಥ ಸಂತೋಷವೇ ಈ ಮುನ್ನುಡಿಯನ್ನು ಬರೆಯಲು ಮುಖ್ಯವಾದ ಕಾರಣ. ಇಲ್ಲಿರುವ ಗೀತೆಗಳ ಭಾಷೆ, ಛಂದಸ್ಸು ಮುಂತಾದ ಅಂಶಗಳನ್ನು ವಿಮರ್ಶಿಸುವಷ್ಟು ಕನ್ನಡ ಸಾಹಿತ್ಯದ ಪರಿಚಯವು ನನಗೆ ಸಾಲದಾದುದರಿಂದ ಅವುಗಳಲ್ಲಿ ನನಗೆ ಕಂಡುಬರುವ ಭಾವ ಗೌರವವನ್ನು ಮಾತ್ರ ಕುರಿತು ಒಂದೆರಡು ಮಾತುಗಳನ್ನು ಹೇಳು ತ್ತೇನೆ.

ಕಾವ್ಯಸ್ವರೂಪವು ಹೀಗೆಂಬೇ ಎಂದು ನಿಶ್ಚಯಿಸಿ ಹೇಳುವುದು ಸಾಧ್ಯವಾಗಿ ತೋರುವುದಿಲ್ಲ. ಅದು ಸಾಧ್ಯವಾಗಿದ್ದರೆ ಬಹುಕಾಲ ದಿಂದ ಅನೇಕ ವಿದ್ವಾಂಸರು ವಿಧವಿಧವಾಗಿ ಹೇಳಿರುವ ಕಾವ್ಯಲಕ್ಷಣ ಗಳಲ್ಲಿ ಯಾವುದೊಂದೂ ಸರ್ವಸಮರ್ಪಕವಾಗದೇ ಹೋಗುತ್ತಿರ ಲಿಲ್ಲ. ಹೆಚ್ಚುಕಡಮೆಯಾಗಿ ಏಕರೂಪವಾಗಿದ್ದು ಬುದ್ಧಿಗ್ರಾಹ್ಯವಾದ ಪದಾರ್ಥಗಳಾದರೆ ಅವುಗಳಲ್ಲಿ ಗುಣಗುಣಿಭಾವವನ್ನು ಪರಿಶೀಲಿಸಿ 'ಇದು ಇಂಥದು', 'ಇದು ಇಂಥದಲ್ಲ' ಎಂದು ಹೇಳಬಹುದು. ಕವಿತೆ ಯಾದರೋ ವಿಚಿತ್ರರೂಪವುಳ್ಳದ್ದಾಗಿ, ಬುದ್ಧಿಮಾತ್ರಗ್ರಾಹ್ಯವಲ್ಲದೆ ಹೃದಯವನ್ನು ಹೊಂದಬೇಕಾಗಿರುವುದರಿಂದ ಅದರ ವಿಷಯದಲ್ಲಿ ಈ ಪ್ರಕಾರವಾದ ನಿರ್ಣಯಕ್ಕೆ ಅವಕಾಶವಿಲ್ಲ. ಆದುದರಿಂದ ಸತ್ಕವಿತೆಗೆ 'ಶ್ಲೋಕಃ ಸ ಏವ ಸುಭಗಃ ಚಿತ್ತಂ ಸಕ್ತಂ ಹಿ ಯತ್ರ

ರಸಿಕಸ್ಯ' ಎಂಬಂತೆ ಸಹೃದಯರ ಅನುಭವವೊಂದೇ ಸರಿಯಾದ ಸೂಚಕವಾಗಿರುವುದು. ಲಕ್ಷಣಾಂತರಗಳು ಅದರ ಹೆಗ್ಗುರುತುಗಳನ್ನು ಮಾತ್ರ ತಿಳಿಸುವುವೆಂದು ಬೇಕಾದರೆ ಹೇಳಬಹುದು. ಸತ್ಕವಿತೆಗೆ ಸಹೃದಯಾನುಭವವೊಂದೇ ಹೇಗೆ ಜ್ಞಾಪಕವೋ, ಹಾಗೆಯೇ ಅದಕ್ಕೆ ಕಾರಕವು—ಎಂದರೆ ಅದರ ಉತ್ಪತ್ತಿಗೆ ಕಾರಣವು—ಕವಿಯಲ್ಲಿರುವ ಶಕ್ತಿ ವಿಶೇಷವೊಂದೇ. ಆ ಶಕ್ತಿಯೊಂದಿದ್ದರೆ ಅದರ ಮಹಿಮೆಯಿಂದ ಕವಿಯು ಮತ್ತಾವ ಗುಣವಿಲ್ಲದಿದ್ದರೂ ಕಸವನ್ನು ಕೂಡ ರಸಮಯವನ್ನಾಗಿ ಮಾಡಬಲ್ಲನು.

ಇಂಥ ಕವಿತೆಗೆ ಗೋಚರವಾಗುವ ವಿಷಯಗಳನ್ನು ಸಾಮಾನ್ಯವಾಗಿ ಎರಡಾಗಿ ವಿಭಾಗಿಸಿ ಹೇಳುವುದುಂಟು. ಅವುಗಳಲ್ಲಿ ಮೊದಲನೆಯದು ಪ್ರಕೃತಿ; ಎರಡನೆಯದು ಪ್ರಕೃತಿ ಮಧ್ಯಗತನಾಗಿ ಸುಖದುಃಖಗಳನ್ನನುಭವಿಸುವ ಮಾನವ. ಇವುಗಳಲ್ಲಿ ಕೆಲವು ಕವಿಗಳಿಗೆ ಪ್ರಕೃತಿ ಸೌಂದರ್ಯವನ್ನು ವರ್ಣಿಸುವುದರಲ್ಲಿ ಆದರಾತಿಶಯವು ಕಂಡು ಬರುವುದು; ಮತ್ತೆ ಕೆಲವರಿಗೆ ಮಾನವನ ಬಾಳಿನ ಗುಟ್ಟನ್ನು ತಿಳಿದು ನುಡಿಯುವುದರಲ್ಲಿ ಅಭಿರುಚಿ ಹೆಚ್ಚು; ಇನ್ನು ಕೆಲವರಿಗೆ ತಮ್ಮ ಕವನದಲ್ಲಿ ಇವೆರಡಕ್ಕೂ ಸಮ ಪ್ರಾಧಾನ್ಯವನ್ನು ಕೊಡುವುದೇ ಸಹಜವಾಗಿರುವುದು. ಈ ವರ್ಗಗಳಲ್ಲಿ ಪ್ರಸ್ತುತ ಕೃತಿಗಳ ಕರ್ತರಾದ ಶ್ರೀಮಾನ್ ನರಸಿಂಹಾಚಾರ್ಯರನ್ನು ಮೂರನೆಯದಕ್ಕೆ ಸೇರಿದವರನ್ನಾಗಿ ಗಣಿಸಬೇಕೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಪ್ರಕೃತಿ ಸೌಂದರ್ಯವನ್ನು ಹೇಗೋ, ಹಾಗೆಯೇ ಮಾನವ ಜನ್ಮದ ರಹಸ್ಯವನ್ನೂ ಇವರು ಮರೆಯಲಾಗದ ಮಾತುಗಳಲ್ಲಿ ಹೇಳಬಲ್ಲರು. ಇದಲ್ಲದೆ ಅನೇಕ ವೇಳೆ ಇವರು ಜಡ ಪ್ರಪಂಚವನ್ನು ಸಹ ಸಚೇತನವನ್ನಾಗಿ ಉತ್ಪ್ರೇಕ್ಷಿಸಿ ಎರಡರ ವರ್ತನೆಗಳನ್ನೂ ಏಕೀಕರಿಸಿ ಬರೆಯುವರು. ಇದರಿಂದ ಇವರ ಗೀತೆಗಳನ್ನೋದುವವರಿಗೆ ಚೇತನಾಚೇತನವೆಂಬ ಬಳಕೆಯ ಭೇದಭಾವನೆಯು, ಯೋಗಿಗಳಿಗೆ ಯೋಗ ಬಲದಿಂದಾಗುವಂತೆ, ತಾತ್ಕಾಲಿಕವಾಗಿ ವಿಗಳಿತವಾಗುವುದು. ಈ

ವಿಧವಾದ ಜೋಡಣೆಯ ನಿಪುಣತೆಗೆ ಇಲ್ಲಿ ಸಂಗ್ರಹಿಸಿರುವ ಗೀತೆಗಳ ಹಾರದ ಮಧ್ಯಮಣಿಯಾದ 'ಹಿಮ್ಮಾಗಿಯ ಮಾಂದಳಿರು' ಎಂಬ ಪದ್ಯಬಂಧವನ್ನು ಒಳ್ಳೆಯ ಉದಾಹರಣೆಯನ್ನಾಗಿ ಹೇಳಬಹುದು. ಶೀತಕಾಲದಲ್ಲಿ ಚಳಿಯಿಂದ ಕಂದಿ ಕುಂದಿಹೋದ ವನದಲ್ಲಿ ಏಕಾಕಿಯಾಗಿ ಕಾಣಿಸಿಕೊಂಡು ಸುತ್ತಿನ ಸಂಕಟಕ್ಕೆ ತಾನೂ ತುತ್ತಾಗಿ ನಂದಿಹೋದರೂ ಭಾವಿಯಾದ ವಸಂತ ಸೌಭಾಗ್ಯವನ್ನು ಸೂಚಿಸುವ ಮಾವಿನ ಚಿಗುರನ್ನೂ, ದುಷ್ಟಕಾಲದಲ್ಲಿ ಹುಟ್ಟಿ ಸ್ವಾರ್ಥವನ್ನೆಣಿಸದೆ ಲೋಕಕ್ಕಾಗಿ ದುಡಿದು ಮಡಿದರೂ ಭಾವಿಯಾದ ಕಲ್ಯಾಣ ಸಂತತಿಗೆ ದಾರಿಮಾಡುವ ಮಹಾಪುರುಷನನ್ನೂ ಅನೇಕ ಪದ್ಯಗಳಲ್ಲಿ ಶ್ಲೇಷೆಯಿಲ್ಲದೆಯೇ ಬೆರೆಸಿ ವರ್ಣಿಸಿರುವರು. ಆದರೆ ಪ್ರಕೃತಿ ಮಾನವರ ಸ್ವರೂಪವನ್ನು ಹೊರಪಡಿಸುವುದೇ ಈ ಗೀತೆಗಳ ಕಡೆಯ ಮಾತಲ್ಲ; ಅವುಗಳೆರಡಕ್ಕೂ ಅಂತರ್ಯಾಮಿಯಾಗಿ ಅವುಗಳನ್ನು ಮೀರಿರುವ ಅಪ್ರಮೇಯ ಮಹಿಮನಾದ ಪರಮೇಶ್ವರನನ್ನು ನಮ್ಮ ನೆನಪಿಗೆ ತರದೆ ಈ ಗೀತೆಗಳು ಪ್ರಾಯಿಕವಾಗಿ ವಿಶ್ರಾಂತವಾಗುವುದಿಲ್ಲ. ಕಲ್ಪನೆಯ ಗಡಿಯನ್ನು ಮುಟ್ಟಿರುವ ಇವರ 'ಕವಿ' ಎಂಬ ಕೃತಿಯಿಂದಲೇ ಈ ಅಂಶವು ಸ್ಪಷ್ಟವಾಗುವುದು—

ಹೇ ಕವಿಯೆ,
ಬಾಳು ಬಾಳುಗಳಾಚೆ ಬ್ರಹ್ಮಾಂಡ ಹೃದಯಾಂತ-
ರಾಳದೊಳು ಸಂತತಂ ಸಂಜನಿಸುವಾನಂದ-
ಮಾತೃಕೆಯೆ ತಾನಾದ, ವಿಶ್ವಕೆಲ್ಲಕು ಹರಡಿ
ವಿಕೃತಿ ಪದರಗಳಲ್ಲಿ ಮೌನವಾಗಿಹ ಶಿವದ
ಗೀತವನು ಕರಣಗೋಚರವಾಗೆ ಸ್ಪಂದಿಸುತ
ಚೇತನರೊಳಾ ಚಿದಾನಂದವನೆ ಮರುಕೊಳಿಪ,
ಪ್ರಕೃತಿ ಶಿಲ್ಪಿಯು ಸಮೆದ ಚಿದ್ಯಂತ್ರ ನೀನಲಾ!
ಮನದ ಮೊನೆಯನು ಮಾಡು ಶಿವಸೂಚಿಯಾಗುವಂತೆ;
ಮರ್ಮವನು ನುಡಿ, ಲೋಕ ತನ್ನ ತಾನರಿಯುವಂತೆ.

ಹೀಗೆ ಇವರ ಗೀತೆಗಳ ವಿಶ್ರಾಂತಿಸ್ಥಾನವಾದ ಭಕ್ತಿಭಾವ ಅಥವಾ ಶಾಂತರಸಕ್ಕೆ ಉಳಿದ ವರ್ಣನಾತಿಶಯಗಳೆಲ್ಲ ಅಂಗವಾಗಿ ಅದನ್ನು

ಪರಿಪೋಷಿಸುವುವು. ಹೊರಗಿನ ಆಕಾರದಲ್ಲಿ ಇವರ ಕವಿತೆ ಹಿಂದಿನವರ ಶೈಲಿಗಿಂತ ಭಿನ್ನವಾಗಿದ್ದರೂ, ಈ ಭಾವ ಅಥವಾ ರಸದ ಪಾರಮ್ಯದಲ್ಲಿ ಅದು ಅತ್ಯುತ್ತಮವಾದ ಪ್ರಾಚೀನ ಕವಿತಾಸರಣಿಯನ್ನೇ ಅನುಸರಿಸುವುದು.

ಅನ್ಯಭಾಷೆಗಳಿಗೆ ಪರಿವರ್ತನೆಯಾಗುವುದರಿಂದ ಈ ಪದ್ಯಬಂಧಗಳನ್ನೋದಿ ಆನಂದಪಡುವ ಸುಯೋಗವು ಕನ್ನಡನಾಡಿನವರಿಗೆ ಮಾತ್ರವಲ್ಲದೆ ಇತರರಿಗೂ ಶೀಘ್ರವಾಗಿ ಲಭಿಸಲೆಂದು ಕೋರುತ್ತೇನೆ.

6–8–1936 ಎಂ. ಹಿರಿಯಣ್ಣ

# ಅರಿಕೆ

ಈ ಪುಸ್ತಕದಲ್ಲಿನ ಕೆಲವು ಪದ್ಯಗಳು "ಪ್ರಬುದ್ಧ ಕರ್ಣಾಟಕ" ದಲ್ಲಿ ಈ ಮೊದಲು ಪ್ರಕಟವಾಗಿದ್ದವು; ಎರಡು "ತಳಿರಿ"ನಿಂದ ಉದ್ಧೃತವಾಗಿವೆ; ಒಂದು "ಸರಸ್ವತಿ"ಯಲ್ಲಿ ಬೆಳಕನ್ನು ಕಂಡಿತ್ತು. "ಹಿಮ್ಮಾಗಿಯ ಮೂಂದಳಿರು" ಎಂಬ ಕವನವನ್ನು ಮೈಸೂರಿನ ಸಂಸ್ಕೃತ ಮಹಾಪಾಠಶಾಲೆಯ ವಿದ್ಯಾರ್ಥಿ ಸಂಘದ ನನ್ನ ಸ್ನೇಹಿತರು ತಮ್ಮ ಪತ್ರಿಕೆಯಲ್ಲಿ ಅಂದವಾಗಿ ಬರೆದು ಪ್ರಚುರ ಪಡಿಸಿದ್ದರು. ಆಮೇಲೆ ಅದು "ಪ್ರಬುದ್ಧ ಕರ್ಣಾಟಕ"ದಲ್ಲಿ ಅಚ್ಚಾಯಿತು. ಹೀಗೆ ನನ್ನ ಪದ್ಯಗಳಿಗೆ ತಂತಮ್ಮ ಪುಸ್ತಕ ಪತ್ರಿಕೆಗಳಲ್ಲಿ ಆಸರೆಯನ್ನು ಕೊಟ್ಟ ಮಹನೀಯರೆಲ್ಲರನ್ನೂ ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಗುರುಕೃಪಾಪಾತ್ರವೂ ಸುಹೃತ್ಪ್ರೇಮಪುಷ್ಪವೂ ಆದ ಈ ಕೃತಿಯಿಂದ ಶ್ರೀ ಯದುಗಿರೀಶನು ಸಂತುಷ್ಟನಾಗಿ ಮನಃಪ್ರಸಾದವನ್ನು ಕರುಣಿಸಲಿ.

ಪು. ತಿ. ನ.

# ವಿಷಯ ಸೂಚಿಕೆ

# ಮಾಂದಳಿರು

## ಉಷಃಕಾಲದಲ್ಲಿ

ಉಷೆಯು ಕಾಲ ಸೋಂಕಿನಿಂದ
ಬಾನು ತಳಿತಿದೆ;
ನಿಶೆಯು ಮಡಿಲನುಳಿದು ಜಗವು
ಜೀವಗೊಳುತಿದೆ;
ಕತ್ತಲಂಜುತೋಡುತಿಹುದು,
ಬೆಳಕು ತಿರೆಯ ತುಂಬುತಿಹುದು;
ನಾಡು ಮೇಡು ಕಾಡೊಳೆಲ್ಲು
ಸೊಗವು ಮೂಡಿ ಬರುತಿದೆ.

ತರುಗಳಿನಗೆ ಮಂಜುಹನಿಗ-
ಳರ್ಘ್ಯ ಹಿಡಿದಿವೆ;
ಅಲರ ಸುರಿದು ಸ್ವಾಗತವನು
ಬಾಗಿ ಬಯಸಿವೆ;
ಪಿಕದ ತೂರ್ಯ ಮೊಳಗುತಿಹುದು,
ಪದ್ಮಗಂಧ ಪಸರಿಸಿಹುದು,
ಖಗಗಳುಲಿವ ವಿವಿಧ ಸ್ವನದ
ಮೇಳ ತೋಪ ತುಂಬಿದೆ.

## ಮಾಂದಳಿರು

ಗರಿಯ ತಿದ್ದಿ ಬೆಡಗಿ ಶುಕಿಯು
ಕೊರಲ ಕೊಂಕಿದೆ;
ಇನಿಯಳೊಡನೆ ಪಾರಿವಾಳ
ಬೇಟ ಹೂಡಿದೆ;
ಮೀಂಗಳೆದ್ದು ನೆಗೆಯುತಿಹುವು,
ತೆರೆಗಳೆದ್ದು ಕುಣಿಯುತಿಹುವು,
ವಿಶ್ವಶಿವದ ಪಥದೊಳಡಿಯ-
ನಿಟ್ಟು ಸೃಷ್ಟಿ ನಗುತಿದೆ.

ಮನುಜ? — ಮನುಜನೇನುಗೈವ-
ನಿಂಥ ಸಮಯದಿ?
ಜಗವು ಜೀವಗೊಳುತಲಿಂತು
ನಲಿವ ಉದಯದಿ?
ಬೆಳಕು ಬಾಳ ಬಿಚ್ಚುತಿರಲು,
ಜೀವ ಕರ್ಮಕೇಳುತಿರಲು,
ಆತ್ಮವಂತ, ಕರಣಪಟುವು —
ಏನ ಗೈವನುದಯದಿ?

ಹಕ್ಕಿ ಹೂಗಳಂತೆ ತಾನೂ
ಎದ್ದು ನಲಿವನೊ?
ಮಿಕ್ಕ ಸೃಷ್ಟಿಯಂತೆ ತಾನೂ
ನಲವಿಗೇಳ್ವನೊ?
ವಿಶ್ವಶಿವದ ಮರ್ಮವರಿತು,
ಆತ್ಮಕರ್ಮ ಧರ್ಮವರಿತು,
ಬಾಳ ಬಟ್ಟೆ ಕಂಡು, ದೃಢದಿ
ಹಾದಿ ನಡೆಯಲೇಳ್ವನೊ?

## ಉಷಃಕಾಲದಲ್ಲಿ

ಇರುಳಿನತಿಗೆ ಬಳಲಿ ಬೆಳಗ
ಮಲಗಿ ಕಳೆವನೊ?
ಮಾಗದಳಲಿಗೆದ್ದು ಕಣ್ಣ-
ನೀರ ಮಿಡಿವನೊ?
ಶಿವವ ಜರೆವ ಸ್ವಾರ್ಥಗಳನು
ಪಾಪಕೊಯ್ವ ಮೋದಗಳನು
ಅರಸಿ, ಕರ್ಮತುಮುಲದೊಳಗೆ
ಸಿಲುಕಿ, ಅಂಜಿ, ಸುಯ್ವನೊ?

ದೀನ ಮನುಜನೇನು ಬಲ್ಲ
ಕರ್ಮ ಧರ್ಮವ?
ಕರಣದಾಳು ಬಲ್ಲನೇನು
ಶಿವದ ಮರ್ಮವ?
ಸೊಗದ ಹೊನ್ನಿನುದಯದಲ್ಲಿ
ಸೃಷ್ಟಿ ನಲಿವ ವೇಳೆಯಲ್ಲಿ
ಮನುಜಗೊಬ್ಬಗಲ್ತೆ ಶರಣು-
ಹೊಂದಿ ನುತಿಪ ಕಜ್ಜವು!

ವಿಶ್ವದೊಡೆಯ ದುರಿತಗಳನು
ದೂರ ಮಾಡಿಸೈ.
ಆವುದೆಮ್ಮ ಶಿವವೊ, ತಂದೆ,
ಅದನು ಕರುಣಿಸೈ.
ಜ್ಞಾನದೀಪ ಹೊತ್ತಿಸೈ,
ಬಾಳ ಬಟ್ಟೆ ಕಾಣಿಸೈ,
ಆತ್ಮಶಿವಕೆ—ನಿನ್ನ ಇಚ್ಛೆ-
ಗೆನ್ನ ಬಾಳ ಹೊಂದಿಸೈ.

# ತ್ಯಾಗವೆ ಒಲುಮೆ

ಮೇಜಿನ ಮೇಲೊಂದು ರೋಜದ ಹೂವು,
ಹಿಂದೆಂದು ಕಾಣದ ಸೊಗಸಿನ ಹೂವು,
ಅಂದೆ ಅರಳಿದ ಹೂವು,
ಸಂಜೆಗೆಂಪಿನ ಹೂವು,
ಕಂಗಳು ತಂಗುವ ಸೊಗಸಿನ ರೇವು.

ಬಾಲಸೂರ್ಯನ ಕಿರಣ ರಂಧ್ರದಿ ತೂರಿ,
ಮಲರನ್ನು ಮುತ್ತಿಡಲು ಹೊಸ ಚೆಲುವ ತೋರಿ,
ಜೀವಗೂಡಿರುವಂತೆ
ಒಲವೆರೆದು ನಗುವಂತೆ
ಕಳಕಳಿಸಿ ಮೆರೆದುದು ಸೋಜಿಗವ ಬೀರಿ.

ಕಣ್ಮುಚ್ಚಿ ಮೆಲ್ಲನೆ ಹೂವ ತುಟಿಗೆತ್ತಿ
"ನನ್ನೊಲವೆ" ಎನ್ನುತ್ತ ಮುತ್ತಿಟ್ಟೆನೊತ್ತಿ;
ಅದರ ಸೊಂಪಿನ ಕಂಪು,
ಸ್ಪರ್ಶದ ಸುಖ, ತಂಪು,
ಮುದದ ಮೋರೆಯು ತೋರೆ ಸ್ವರ್ಗಕೆ ಎತ್ತಿ.

ಬಾನಿನ ನೆತ್ತಿಯನೇರಿತು ಹೊತ್ತು;
ಚೆಂದದ ಹೂವಿನ್ನು ತುಟಿಮೇಲೆ ಇತ್ತು.
ರೋಜದ ರೂಪು,
ಪ್ರಾಯದ ಹುರುಪು,
ಆಸೆಯಾವೇಶಕ್ಕೆ ಕಂದಿಹೋಗಿತ್ತು.

## ತ್ಯಾಗವೆ ಒಲುಮೆ

ತುಟಿಯಿಂದ ತೆಗೆದೆನು ಸೊರಗಿದ ಹೂವ,
ದುಂಡನೆ ದಳವೆಲ್ಲ ಸುರುಟಿಕೊಂಡಿರುವ,
ಪ್ರೇಮಕೆ ಬಿಂಕವ-
ನೀಯಲು ಸುಂಕವ,
ಹೆಚ್ಚಿದ ಕಂಪಿಗೆ ಸೋತುದು ಜೀವ.

"ಒಲುಮೆಯು ಸಲುವಾಗಿ ಎಲ್ಲವ ತೆತ್ತೆ,
ಚೆಂದವ, ಪ್ರಾಯವ, ಜೀವವ ತೆತ್ತೆ;
ಒಲಿಯಲು ತೆತ್ತೆ,
ಒಲಿದುದಕೇ ತೆತ್ತೆ;
ಸಾಯುವೆ; ತುಸಹೊತ್ತು ಮುತ್ತಿಡು ಮತ್ತೆ."

ಎನ್ನಲು ಹೂವಿನ ದಳಗಳು ಅಲುಗಿ,
ಎನ್ನಯ ಕ್ರೂರತೆಗೆ ದೈನ್ಯದಿ ಕೊರಗಿ,
ನುಡಿಯೆನ್ನ ಚುಚ್ಚಿತು,
ಹೃದಯವ ಕೊಚ್ಚಿತು,
ತುಟಿಗೆತ್ತಿ ಮುತ್ತಿಟ್ಟೆ ರೋಜವ ತಿರುಗಿ.

ಹೂವಂದು ಸತ್ತಿತು ಮುತ್ತನು ಕೊಟ್ಟು,
ಮುತ್ತಿನ ನೆನಪಿಗೆ ಕಂಪನು ಬಿಟ್ಟು;
"ತ್ಯಾಗವೆ ಒಲುಮೆ
ಬಾಳ್ವೆಯ ಕುಲುಮೆ"
ಎನ್ನುವ ನುಡಿಯನ್ನು ಎದೆಯೊಳಗೆ ನೆಟ್ಟು.

## ಹೋದ ಬಾಲ್ಯ

ಕಿರಿಯತನವು ಕಳೆದುದನ್ನು
ಮರೆತು ನಡೆವುದೆಷ್ಟು ಹುಚ್ಚು!
ಹರೆಯದೊಡನೆ ನಿಲುವುದೆಂತು
ಕಿರಿಯತನದ ಮುಗ್ಧತೆ?

*    *    *

ಹಗಲು ಹಣ್ಣುತಿರುಗುತಿತ್ತು,
ಹೊಗೆಯ ಬಂಡಿಯೋಡುತಿತ್ತು,
ಮನದಿ, ಹಿಂದೆ ಬಿಟ್ಟುದರದು
ನೆನಪು ಬೇಯುತಿದ್ದಿತು.

ಕಳೆದ ಸುಖವ, ತಬ್ಬುವಳಲ,
ಒಳಗೆ ಕುಳಿತು ನೆನೆಯುತಿದ್ದೆ.—
ಹೆಗಲ ಜಗ್ಗುತೊದೆದರಾರೊ!
ಹಗಲ ಕನಸು ಚೆದರಿತು.

ಹಿಂದೆ ನೋಡೆ— ನಗುವ ಕಣ್ಣ
ಕಂದನೊಂದು! ತುಂಟತನದ
ಬೆಳಕ ಹೊಳೆಸಿ, ಕಣ್ಣ ನೆಟ್ಟ
ಚೆಲುವನೆಂತು ಮರೆವೆನು!

“ಬೇಡ ಕಂದ, ಹೊರಗಿನವರ
ಕಾಡಲುಂಟೆ? ಬೇಡ ಬಿಡೆಲೊ”
ಎಂದು ತಡೆವ ತಾಯ ನುಡಿಯ
ಕಂದನಂದು ಕೇಳದು.

## ಹೋದ ಬಾಲ್ಯ

ಆದರ ತುಂಟತನವ ಕಂಡು
ಮುಂದವನಾಂತೆನಂದು ನಾನು.—
ಹುಡುಗನೊದೆಗೆ ಅರ್ಥವುಂಟೆ?
ನುಡಿಗೆ ಕೊಂಡಿ ಇರುವುದೆ?

* * *

ಎಳೆಯನಂತೆ ಹಗಲ ಜಗ್ಗಿ
ಕೆಳೆಯನೊಡನೆ ಸೆಣಸಲಿಲ್ಲ;
ದಿಟ್ಟತನದಿ ನಗುವ ಕಣ್ಣು
ನೆಟ್ಟು ಜರೆಯಲಿಲ್ಲವು.

ಹರೆಯತನಕೆ ಬೆಳೆದುದನ್ನು
ಮರೆತು ನುಡಿದೆನೊಂದು ನುಡಿಯ.
ಆದರದಕೆ ಕೊಂಡಿಯಿತ್ತು,
ಎದೆಯ ಚುಚ್ಚಿ ಕೊರೆಯಿತು.

'ಯುವಕ'ನೆನ್ನುವರಿವು, ಅಯ್ಯೊ,
ಅವನ ತೆರದೊಳೆನಗೆ ಇತ್ತೆ?
ಆದರೀಗ ಅದರ ತಿಳಿವು
ಎದೆಯನೆಂತು ಇರಿವುದು!

* * *

ಕಿರಿಯತನವು ಕಳೆದುದನ್ನು
ಮರೆತು ನಡೆವುದೆಷ್ಟು ಹುಚ್ಚು!
ಆದರೆಷ್ಟು ನೋವು: ಬಾಲ್ಯ
ಹೋದುದೆಂದು ತಿಳಿಯಲು!

# ಮಗುವಿನ ನಗು

ವರ್ಷದ ನಿಶಿಯೊಳು ಮುಗಿಲಿನ ಮರೆಯೊಳು
ಇಣಿಕುವ ಚಂದ್ರನ ಜೊನ್ನದೊಲು,
ಹರ್ಷವು ಮೂಡಿತು ಚಿಂತೆಯ ಸದನದಿ
ಹೊಳೆಯಲು ಆಂಡಾಳಿನ ನಗೆಯು.

ಜಾಜಿಯ ಮುಗುಳನು ಮುತ್ತಿಡೆ ಸುಸುಳಿದ
ಕಿರಣದ ಚೆಲುವಿನ ಹೊಸ ನಗೆಯು,
ವ್ಯಾಜವೆ ಇಲ್ಲದೆ ಸೋಜಿಗಪಡುವಾ
ಬಲು ಬಲು ಸೊಗಸಿನ ಹೊಸ ನಗೆಯು.

ಉಡುಗಣದೊಡೆಯನ ನಗೆ ಇದ ಹೋಲ್ವುದೆ?
ಈ ಬಗೆ ಚಪಲತೆ ಅದಕೆಲ್ಲಿ?
ಮೋಡದ ಮಿಂಚನು ಹೋಲುವುದೆನಲೆ?
ತುಮುಲವನೆಬ್ಬಿಸದೆದೆಯೊಳಗೆ.

"ಮುದ್ದಾಂಡಾಳೀ ನಗೆಯೆಲ್ಲಿತ್ತೆ,
ಬಗೆಯನು ಸೆರೆಹಿಡಿವೀ ಬಲೆಯು?
ಕದ್ದೆಯ ಭೂತಳಕಿಳಿಯುವ ಸಮಯದಿ
ದಿವದಿಂದೀ ಹೊಸ ಸೋಜಿಗವ?"

ಎಂದೆನು ಹರುಷದಿ ಮುತ್ತಿಡುತವಳಾ
ಸೋಜಿಗ ಪಡುವಾ ಕಂಗಳನು.
ಎಂದೆನು ಅಚ್ಚರಿ ಹೆಚ್ಚಲು ತಿರುಗಿಯು,
"ಆಂಡಾಳೀ ನಗೆಯೆಲ್ಲಿತ್ತೆ?"

## ಮಗುವಿನ ನಗು

ಎಸಳಾ ಮಗುವಿನ ನಗೆಯಿಮ್ಮಡಿಸಿತು,
ಕಂಗಳು ಹೊಳೆದುವು ಕೌತುಕದಿ.
ಮೌನದೊಳರೆಚಣ ಒಳಮೊಗವಾದುವು,
ಆತ್ಮನ ನೋಡುವ ತೆರದೊಳಗೆ.

"ಎನ್ನಾಂಡಾಳೀ ನಗೆಯೆಲ್ಲಿತ್ತೆ?"
ಥಟ್ಟನೆ ನುಡಿಯಿತು ಕಿರುಗೂಸು:
"ಎನ್ನೀ ಕಿರುನಗೆ ಕಣ್ಣೊಳಗಿದ್ದಿತು,
ಅಲ್ಲಿಂದುಕ್ಕಿತು ಬಾಯೊಳಗೆ."

ಉತ್ತರ ಸಿಕ್ಕಿತು, ಒಗಟೂ ಒಡೆಯಿತು,
ಹೊಮ್ಮಿತು ಹರುಷದ ತೆರೆತೆರೆಯು.
ಮುತ್ತಿನೊಲಿರುವೀ ಮಾತಿಗೆ ಸೋತೆನು,
ಮೂಡಿತು ಮನದೊಳಗಚ್ಚರಿಯು.

# ರಾಮಿಯ ಗಂಡು

ಸರಸಿಯ ದಡದೊಳು ಹೊಂಗೆಯ ನೆಳಲೊಳು
ಗರುಕೆ ಮೆತ್ತೆಯ ಮೇಲೆ ಉರುಳಿ,
ಹರುಷದ ಮುದ್ದೆಯೆ ತಾನೆಂಬ ತೆರದೊಳ-
ಗಿರುವನು ರಾಮಿಯ ಗಂಡು.

ಹೊಲ್ಲಳು ರಾಮಿ; ಇಂದವಳಿಗೆ ಮನೆಯಿಲ್ಲ—
ಇಲ್ಲ ಬಾಂಧವ್ಯದ ಅಂಟು.
ಎಲ್ಲವು ಆ ಕಂದನೊಬ್ಬನೆ ಬಾಳಿನೊ-
ಳುಲ್ಲಸ ಹೂಡುವ ನಂಟು.

ಹಸುರೊಳಗಾಡುವ ಕಂದನ ನೋಡುತ
ಬಸಿರನ್ನು ನೆನೆವಳು ರಾಮಿ—
ಕಸಕಿಂತ ಹೀನನು ತನು ಮನ ಮಾನವ
ಕಸಿದುಕೊಂಡಾ ಹಳೆ ಕತೆಯು.

ನೋಟಕ್ಕೆ ರೂಪಿಲ್ಲ, ಕೂಟಕ್ಕೆ ಸಮನಲ್ಲ,
ಬೇಟಕ್ಕು ನಯವಿಲ್ಲ ಕನಕ.
ಮಾಟಗಾರಿಕೆಯೇನೊ? ಬಲ್ಲಳೆ? ಆವುದೊ
ಹೂಟದಿ ಗೆದ್ದನು ತನ್ನ.

"ರಾಮಿ, ನನ್ನೊಲುಮೆಯೆ, ನನ್ನೆದೆ ಹಣತೆಯೆ,
ಕಾಮಿಸಿ ಬಂದಿಹೆ ನಿನ್ನ.
ಪ್ರೇಮದ ಚೆಲುಮೆಯ ಚಿಮ್ಮಿಸುತೀ ಮರು-
ಭೂಮಿಯ ದಾಹವ ತಣಿಸು.

"ಮನೆ ಇದೆ — ಆದೊಡೆ — ದೀಪ ಹಚ್ಚುವರಿಲ್ಲ,
ದನ ಕರು ಹೊಲ ಗದ್ದೆ ವ್ಯರ್ಥ.
ಮನೆಸಿರಿಯಾಗು ಬಾ, ಬದುಕಿಗೆ ಬೆಳಕಾಗು,
ಮನದನ್ನೆ, ಬಾಳಿಸ ಕಣ್ಣೆ."

ಕನಕ ಸಾಮಾನ್ಯನೆ? ಒಲಿಸಲಿದೇ ಮೊದಲೆ?
ಪ್ರಣಯಿಗಳೊಳು ಕಡುಜಾಣ.
ಇನಿದಾಯ್ತು, ರಾಮಿಯ ಕಿವಿಗಮೃತವ ಹೊಯ್ದು.
ತನುನಯದಾ ಸವಿಸೊಲ್ಲು.

ಬಿಟ್ಟಳು ತೌರೂರ, ನೆಚ್ಚಿದ ತಂದೆಯ,
ದಿಟ್ಟ ಕನಕಣ್ಣನ ಮೆಚ್ಚಿ.
ಕಟ್ಟುಂಟೆ ಪ್ರಾಯದೊಳುಕ್ಕುವ ಮೋಹಕೆ?
ದುಷ್ಟನ ಹುಚ್ಚಿ ನೆಚ್ಚಿದಳು.

ದಿನ ದಿನ ಊರೂರನಲೆಯುತ ಕಳೆದರು.
ಕನಕನ ಮನೆಮಠವೆಲ್ಲಾ
ಕನಸಿನ ಗಂಟಾಯ್ತು. ರಾಮಿಯು ಕನಸೊಡೆ-
ದನುತಾಪದುರಿ ತಾಗಿತೆದೆಗೆ.

ಕಾಮಿ ಬಿಟ್ಟೋಡಿದನಬಲೆಯ ಸತ್ರದಿ
ಕಾಮದ ಬಿಸಿಯಾರಿಹೋಗೆ.
ಭೀಮಭವಾರ್ಣವದೊಳಗೀಜಲಿಬ್ಬರೆ:
ರಾಮಿ — ಮತ್ತಾಕೆಯ ಪಾಪ!

ಹತ್ತಿರ ಕರೆದಳು ಮೋಹದ ಮುದ್ದನ,
ಮುತ್ತಲು ಕಂಬನಿ ಕಣ್ಣ.
ಕತ್ತನಾಲಿಂಗಿಸಿ ಮುಡಿಯ ನೇವರಿಸುತ್ತ-
ಲೊತ್ತಿದಳಧರವ ತಲೆಗೆ.

“ಒಲುಮೆಯ ಕುರುಡಿಗೆ ಬಲಿಯಾದೆವಿಬ್ಬರು.
ಬಳುವಳಿಗೀ ಬಾಳೆ ನಿನಗೆ?
ಕುಲವಿತ್ತೆ, ರೂಪಿತ್ತೆ, ಶೀಲವೆ ಕನಕಗೆ?
ಹುಲುಮನುಜಗೆ ನಾನೆಂತೊಲಿದೆ?

“ಪ್ರಣಯ ಪ್ರಪಾತಕ್ಕೆ ಧುಮುಕೆಂದು ನಚ್ಚೊಂದು
ಕೆಣಕಿತೊ ಮನವ? ನಾನರಿಯೆ.
ಕನಕನ ನೆಮ್ಮುವ ನರಕವೆ ಬಾಗಿಲೊ,
ಗಿಣಿ, ನಿನ್ನನಪ್ಪುವ ದಿವಕೆ?

“ಒಲುಮೆಯ ಹುಚ್ಚೊಳು ನೀ ಬಹ ನೆಚ್ಚಿತ್ತೊ?
ಒಲಿದೆನೊ ನಿನಗಾಗಿ, ಚಿನ್ನ?”
ಬಲು ಮೋಹದಿಂದಣುಗನ ಮುತ್ತಿಟ್ಟಳು ರಾಮಿ —
ಇಳೆಯೊಳು ತನ್ನೊಂದೆ ನಚ್ಚ.

# ಹಣತೆ

ಮುದವಾರಲು, ಅಳಲೇರಲು,
ಭಯ ಮಸಗಲು — ತುಡಿದು,
ಮನ ದೇವಗೆ ಮೊರೆಯಿಡುವುದು
ಸರನೊಲುಮೆಯ ಜರೆದು.

ಹರುಷವಿದ್ದರೆ ದೇವನೇತಕೆ?
ಹರಕೆಯಾತ್ರೆಗಳೇಕೆ?
ಮನುಜಗಾಸೆಗಳಿಂಗಿಹೋದರೆ
ಹರಿಯ ಹಂಗವಗೇಕೆ?
ಸ್ವಾರ್ಥತ್ಯಾಗದ ಸಲವನರಿಯಲು
ಮೋಕ್ಷದೊಳು ನೆಚ್ಚೇಕೆ?
ಮರ್ತ್ಯನೊಲುಮೆಗೆ ಕಂಗಳಿದ್ದರೆ
ದೇವನೊಲುಮೆಯದೇಕೆ?

ಆಸೆ ಸಲಿಸಲು ಪಾಪಕೆಳಸಲು
ದಹಿಸಲು ಪರಿತಾಪ,
ಬುವಿಯೊಳೆಲ್ಲಿಯೂ ದೊರೆಯದೆಯೆ ಇರೆ
ಕ್ಷಮೆ, ದಯೆ, ಅನುತಾಪ,
ಸ್ವಾರ್ಥಸ್ವಾರ್ಥದ ತುಮುಲಯುದ್ಧದಿ
ಬಯಲಾಗಲು ಬಯಕೆ,
ಅಂದು ದೇವಗೆ ಮೊರೆಯನಿಡುವುದು —
"ಎರೆ, ಶಾಂತಿಯ ಮನಕೆ!"

## ಮಾಂದಳಿರು

ದೇವ, ಹಣತೆಯ ಹೊತ್ತಿಸಿರುವೆನು
ನಿನಗೆ ಸನ್ನಿದೆಮನೆಯೊಳ್.
ಆಸೆ, ಕಂಬನಿ, ಭಯ, ಬಯಕೆಗಳ
ತೈಲ ತುಂಬಿಹೆ ಸೊಡರೊಳ್.
ನೆಲೆಯ ದೀಪವು ಮಿಣುಗುವನಕವೂ
ಮೊರೆಯನಿಡುವೆನು ಮಾನ್ಯ!
ತೈಲ ಬತ್ತಲು, ಸೊಡಲಿದಾರಲು,
ನೀನೆಲ್ಲಿಹೆ? — ಶೂನ್ಯ!

# ನಿನ್ನ ನಾನರಿಯೆನೈ

ನಿನ್ನ ನಾನರಿಯೆನೈ ಅರಿಯೆ ಅರಿಯೆ,
ಎನ್ನ ಮೋಹವ ಮೀರಿ ನಿಂದಿರುವೆ ಹರಿಯೇ.

ನಿನ್ನಿರವು ನನ್ನಿರವಿನೊಳಗೆಂದು ನೆಚ್ಚುವೆನು,
ಇನ್ನೊಮ್ಮೆ ಶಂಕಿಸುವೆ ಕೆದಕಿ ಬೆದಕಿ.
ನನ್ನಿರವ ಜಗದಿರವನೆಲ್ಲವನು ಮೀರಿರುವ
ನಿನ್ನಿರವ ಮರ್ಮವನು ಎಂತರಿವೆ ಹರಿಯೇ?
ನಿನ್ನ ನಾನರಿಯೆನೈ ಅರಿಯೆ ಅರಿಯೆ,
ಸಣ್ಣ ಹನಿ ಸಾಗರವನರಿಯದೊಲು ಹರಿಯೇ.

ವಿಶ್ವಗಳ ವೈಶಾಲ್ಯ, ವೈಚಿತ್ರ್ಯ, ಶಾಶ್ವತತೆ—
ನಶ್ವರತೆ ಈ ಬಾಳ—ಎಲ್ಲಿಗೆಲ್ಲಿ?
ವಿಶ್ವಸತ್ತ್ವವೆ, ನಿನ್ನ ಸಾರವೇ ನಾನೆಂದು
ವಿಶ್ವಾಸವಿಡಬಹುದೆ? ನನ್ನಿಯೇ, ದೊರೆಯೆ?
ನಿನ್ನ ನಾನರಿಯೆನೈ ಅರಿಯೆ ಅರಿಯೆ,
ಹೆಮ್ಮರವ ಚಣಬಾಳ ಮಲರಂತೆ ಹರಿಯೇ.

ಚಲನವಲನದ ಹಕ್ಕ ಕಸಿಯದಲೆ, ತೋರದಲೆ,
ಇಳೆಯ ಕರ್ಷಣಶಕ್ತಿ ಜನವ, ಜಗವ
ಸೆಳೆವಂತೆ, ನಿನ್ನಿಚ್ಚೆ ನನ್ನರಿವ ಬಳಸಿಹುದ
ತಿಳಿಯದಲೆ, ಸ್ವಾತಂತ್ರ್ಯಕಂಜುವೆನು ಹರಿಯೇ.
ನಿನ್ನ ನಾನರಿಯೆನೈ ಅರಿಯೆ ಅರಿಯೆ,
ನಿನಗೆ ನಾ ಹೊರಗೆಂಬ ಹುಸಿಭಯದಿ, ದೊರೆಯೇ.
ನಿನ್ನ ನಾನರಿಯೆನೈ ಅರಿಯೆ ಅರಿಯೆ.

# ಹೇಮಾವತಿಯ ತೀರದಲ್ಲಿ

ಹಗಲ ಕಣ್ಣನು ಮುಂಕು ಕವಿಯಿತು,
ಮುಗಿಲ ಬಾಣದ ಬಿರುಸು ಹೆಚ್ಚಿತು,
ನೆಗೆದು ನೊರೆಯನು ಕೀಳುತೋಡಿತು
    ಮಲೆಯನಾಡಿನ ಹೇಮೆಯು.

ಕರೆಯ ಮಂಟಪದೊಳಗೆ ಕುಳಿತು,
ಬೆರಗುಮಾಡುವ ಪ್ರಕೃತಿಯಂದಿನ
ಇರವ ನೋಡುತ ಮೂಕರಾದೆವು
    ನಾನು ರಾಮೂ ಇಬ್ಬರೂ.

ಮುಗಿಲಿನಾರ್ಭಟ, ಗಾಳಿಯುಲುಹು,
ಹಗಲ ಕಂಬನಿಯಂತೆ ಸೋನೆಯು,
ನೆಗೆದು ಮೊರೆಯುವ ಹೇಮೆಯುಬ್ಬರ—
    ಏನು ಭೀಕರ ಪ್ರಕೃತಿಯು!

ಬಾನ ನೀಲವನಲೆಯೊಳಿಟ್ಟು,
ತಾನದೊಂದಿಗೆ ಹಾಡಿ ತೂಗಿದ
ಮಾನವತಿ ಮೃದುಗಮನೆ ಹೇಮೆಯೆ
    ಕನಲಿ ಮೊರೆವೀ ಹೇಮೆಯು!

ಹಗಲಿನಂದಿನ ರೂಪು ತಂದಿತು
ಬಗೆಗೆ ಸಾವಿನ ಚಿಂತೆಗಳನು,
ನಗೆಯನಣಕಿಸಿ ಸೊಗವ ಜರೆಯುತ
    ಬವಣೆಗೊಳ್ಳುವ ಭಾವವ.

ಏನು ಸೋಜಿಗ ಇಂಥ ದಿನದೊಳು
ಸ್ನಾನಮಾಡಲು ಪುಣ್ಯಕೆಳಸಿ
ಸಾನುರಾಗದಿ ಬಂದ ಬಾಲೆಯು-
ರಸುವ ನುಂಗಲು ಹೇಮೆಯು!

ಇರಲಿ ರೂಪವು, ಇರಲಿ ಬೆಡಗು,
ಸುರರ ಕನ್ಯೆಯು ಜರೆವ ಕೊರಲು,
ಇರಲಿ ಸ್ವರ್ಗದ ಮೌಗ್ಧ್ಯ — ಕನ್ನೆಯು
ಹೊಸಲ ಮುನಿಸನು ತಡೆವಳೆ?

" ಇರುಳನೆಲ್ಲಾ ಹಾಡಿ ದಣಿದು
ಕೊರಲು ಕಟ್ಟಿದೆ, ಮೊಗವು ಸೊರಗಿದೆ.
ಬರಿಯ ಛಲವೇಕಿಂದು ಏಾವರೆ,
ಸೋನೆ ಹಗಲೊಳು, ಹೊಳೆಯೊಳು?"

ಕೆಳದಿಯರ ಜೊತೆ ಕೂಡಿ ಸರಸದಿ
ಹೊಳೆಯೊಳಲೆಯುತ ನಲಿವ ಕೌತುಕ-
ಕೆಳಸಿ, ತುಡಿಯುವ ಬಾಲೆ ಕೇಳ್ವಳೆ
ತಾಯಿ ನುಡಿದಾ ಹಿತವನು?

"ಬಾರೆ ಕಮಲೆ, ಬಾರೆ ಗೌರಿ,
ಬಾರೆ ಶಾರದೆ, ಪುಣ್ಯದಿನದೊಳು
ಕಾರ ಮುಗಿಲಿನ ಮೊಳಗಿಗಂಜುತ
ಹೊಳೆಗೆ ಹೋಗದೆ ನಿಲ್ವರೆ?"

ಏನು ಸಡಗರ! ಏನು ನಗೆಯು!
ಏನು ಉಲ್ಲಸವವರಿಗಂದು!
ಹೊಸಲೊಳಡಗಿದ ಜವನ ಮೊಗದೊಳು
ನಗೆಯು ಹರಡುವ ಸರಸವು!

ಅವರ ಮೋದಕೆ, ಆದೊಡಯ್ಯೋ,
ಬುವಿಯೊಳಂದೇ ಚರಮದಿನವು.
ಅವರ ಜೀವದ ಹಣತೆ ಕ್ಷಣದೊಳು
ನಂದಿಹೋಯಿತು ಹೊಸಲೊಳು.

ಹೊಳೆಯ ಮಂಟಪದೊಳಗೆ ಕುಳಿತು
ಹಳೆಯ ನೆನಪನು ಮನಕೆ ತಂದೆನು :
ಹಳುವ ತುಂಬಿದ ಗೋಳ ಹೊಳಲನು,
ಹರಿದ ಕಂಬನಿಕಾಲ್ವೆಯ ;

ಆರ ಗಾನದ ಲಹರಿ ಹೃದಯಕೆ
ತೂರಿ ತೋರಿದ ಆತ್ಮದರಕೆಯ-
ನಾರ ಪ್ರೇಮವೆ ಪೂರ್ಣಮಾಡಿತೊ,
ಅಂಥ ತಂಗಿಯ ಸಾವನು.

ತಿಳಿವು ಮರಳಿತು, ಮನದ ದುಗುಡವ-
ನಳೆದು ಮರುಕವನೆರೆವ ತೆರದೊಳು
ತಲೆಯ ತಡಹುತ ರಾಮುವಿದ್ದನು —
ನುಡಿದೆನೀಪರಿ ಕೆಳೆಯಗೆ :

"ಏನು ದಿನವಿದು, ಕೆಳೆಯ, ಹೇಮೆಗೆ
ಏನಿದಬ್ಬರ! — ಇಂಥ ಹಗಲೊಳು
ಹೊನಳೊಳಳಿದಳು ತಂಗಿ ಜಾನಕಿ;
ತೋರಬಲ್ಲೆಯ ಮಸಣವ?"

ಎನ್ನ ಮಾತಿಗೆ, ರಾಮು ಸುಯ್ಯುತ,
"ಚಿನ್ನ, ನೆರೆಯೊಳು ಕಾಣದೆ"ಂದನು —
ಎನ್ನ ಕಂಬನಿಕೋಡಿ ಬಿರೆಯಿತು
ಮೊರೆವ ಹೇಮೆಯ ತೆರೆಯೊಳು.

ಸಾವು ಸೋಕುವುದೆಲ್ಲರನು, ದಿಟ—
ಸಾವಿಗಂಜುತ ಗೋಳಕರೆವುದು
ಸಾವು ಒಯ್ಯುವ ಜೀವಕಲ್ಲವು—
ಹಿಂದೆ ಉಳಿಸುವ ಅರಕೆಗೆ!

# ಬಾಳಿನ ಹಂಬಲು

೧

ಕೂಸಿಗಂದು ಏನು ಬೇಡ,
ತಿಂಡಿ ಗೊಂಬೆ ಮುದ್ದು ಬೇಡ.
ಏನೊ ಅರಕೆ, ಏನೊ ಬೇಸೆ,
ಅತ್ತು ಸೊರಗಿತು :
" ಅಮ್ಮ ಎಲ್ಲಿ ಹೋತು " ಎನುತ
ಅತ್ತು ಸೊರಗಿತು.

ಅಳುವ ಕೇಳಿ ಬಂದ ತಾಯು
ಅಮೃತಸ್ಪರ್ಶಕಾರೆ ಗಾಯು,
ತೊಯ್ದು ಕಣ್ಣು ಬಿಚ್ಚಿ, ಸುಳಿಸಿ-
ತೊಂದು ನಗೆಯನು —
" ನಿನ್ನನುಳಿಯೆ ಬಾಳು ಶೂನ್ಯ ! "
ಎನುವ ನಗೆಯನು.

೨

ಕೂಸು ಬೆಳೆದು ಆದ ರಾಮು.
ಇಂದು ನೆರೆಯ ಮನೆಯ ಶಾಮು
ರಾಮುನೊಂದೆ ಬಯಕೆ, ಕನಸು,
ಬಾಳ ಧ್ಯೇಯವು ;
ಆಸೆಗಳಿಗೆ ಕಲ್ಪತರುವು,
ನೋವಿಗಮೃತವು.

ಒಂದೆ ಜೀವದೆರಡು ಕವಲು ;
ರಾಮು — ಶಾಮು : ಹಾಡು — ಹೊಳಲು.
ತುಂಬುಗಣ್ಣೊಳವನ ರಾಮು
ಸೆರೆಯಕೊಳುವನು :
“ ನಿನ್ನನುಳಿಯೆ ಬಾಳು ಬಯಲು ”
ಎಂದುಕೊಳುವನು.

೩

ರಾಮುವೀಗ ರಾಮರಾಯ !
ಏನು ಠೀವಿ ! ಎಂಥ ಪ್ರಾಯ !
ನಿತ್ಯ ಕನಸುಕಾಂಬ ತೆರದ
ನೋಟದಲೆತವು ;
ಒಲುಮೆ ನೆರೆಗೆ ಸಿಲುಕಿದವನ
ಮನದ ಸೆಳೆತವು !

ಇಂದು ಸರಳೆ ಅವನ ಜಗವ
ತುಂಬಿ, ಬಾಳ ಸೂರೆಗೊಳುವ-
ಳಾತ್ಮವನ್ನೆ ಮಾಸಲಿಟ್ಟು
ರಾಮು ಒಲಿವನು ;
“ ಸುಳಿದೆ, ಸರಳ, ಬಾಳ ಟೊಳ್ಳು
ತುಂಬಿ ”ತೆನುವನು.

೪

ಸರಳೆ ರಾಮುರೊಲುಮೆ ಸೂತ್ರ
ಹಸುಳೆ ಕಿಟ್ಟು. ಮೊದಲು — ಚಿತ್ರ!
ರಾಮುಗದರ ಬಾಳ ಗುಟ್ಟು
ಅರ್ಥವಾಗದು:
"ನಮ್ಮ ಪ್ರೇಮುಕಡ್ಡ ಬಂದ
ಗಂಡವೇನಿದು?"

ಒಂದು ದಿನದಿ ಕೂಸು ತನ್ನ
ಬೆಳಕೆ ದ್ರವಿಸಿ ಹರಿವ ಕಣ್ಣ
ಮೊಗದಿ ನೆಟ್ಟು, ಅವನ ಬೆರಳ
ಬಾಯಿಗೊಯ್ಯಲು,
ರಾಮುನೆಂದ, "ತೀರಿತಿಂದು
ಬಾಳ ಹಂಬಲು!"

೫

ರಾಮುರಾಯುನೆಂಥ ಮುಸುಜ!
ಸಿರಿಯು ಘೃಣೆಯು ಹಿರಿಯು ಕಣಜ!
ಏನು ಪ್ರತಿಭೆ, ಎಂಥ ವಿನಯ!—
ಯಶದ ಹೊಗಳದು.
ಆತನೊಂದೆ ಬಯಕೆ ಒಲಿದು
ಬರುವ ಮೊಳಗದು.

ಜಸದ ಹೆಣ್ಣು ಒಲಿದು ನಗಲು,
ನಗೆಯು ಮೊಗದಿ ಬಿಂಬಿಸಿರಲು,
ಬಾಳ ಸಂಜೆಯಲ್ಲಿ ಯಶಕೆ
ರಾಮರಾಯರು,
"ಬಂದೆ, ಬಾಳು ಪೂರ್ಣವಾಯ್ತು"
ಎಂದು ನುಡಿದರು.

೬

"ಇಲ್ಲಿ ಹಳ್ಳ, ಅಲ್ಲಿ ತಿಟ್ಟು"
ಎನುತ ಕೋಲ ಹಿಡಿದು ಪುಟ್ಟು
ನಡೆಸುತಿರುವ ಪಲಿತ ಶಿರದ
ತಾತ—ರಾಯರು!
ಕೂಸಿಗಿಂತ ತ್ರಾಣಿಯಲ್ಲ
ಪಾಪ!—ರಾಯರು.

ಒಂದು ದಿನದೊಳಿರುಳಿನಲ್ಲಿ
ಕಿರಣವೊಂದು ಹೊನ್ನ ಚೆಲ್ಲಿ,
ಬಾಳ ಸೆರೆಯ ಬೆಳಗೆ, ತಾತ
ಚಕಿತರಾದರು:
"ಬಂದು ಬಾಳಿಗರ್ಥವಿತ್ತೆ,
ಮೃತ್ಯು" ಎಂದರು.

# ಚಂದ್ರಚುಂಬಿತ ಯಾಮಿನೀ

ಚಂದ್ರಚುಂಬಿತ ಯಾಮಿನೀ
ನವವಿರಹಿ ಚಿತ್ತೋನ್ಮಾದಿನೀ,
ಜಾರುತಿದೆ ಕಲನಾದಿನೀ,
ಅದೊ! ಹಾಡುತಿರುವಳು ಕಾಮಿನೀ.

ತರುಣಿ ವೀಣೆಯ ಮಿಡಿವಳು
ತಚ್ಛ್ರುತಿಗೆ ವಾಣಿಯನೆಳೆವಳು —
ಮಧುರಗೀತದ ನುಡಿಯೊಳು
ತನ್ನೆದೆಯ ಭಾವವ ಮೊಗೆವಳು :

**ಒಲುಮೆ ಹೃದಯವ ಹೊಗಲು ಬಯಸಲು**
**ಆರು ತಡೆಯಲು ಬಲ್ಲರು?**
**ಎದೆಯ ಬಿಟ್ಟದು ಹಾರ ಬಯಸಲು**
**ಆರು ತಡೆಯಲು ಬಲ್ಲರು?**

ಚೆಲುವೆ, ಯೌವನದೀಪ್ತಳು,
ಮೋಣೊಲುಮೆ ಕನಸೊಳಗಿರುವಳು.
ಒಲುಮೆಸಚ್ಚನು ನಂಬಳು,
ಹೊಸ ಭಯಕೆ ತಲ್ಲಣಗೊಂಬಳು.

ಒಲುಮೆ ಹಕ್ಕಿಯು ಸುಳಿಯಲು
ಅದರಂದಕಚ್ಚರಿಗೊಂಡಳು.
'ಒಲುಮೆ' ಎಂದವಳರಿಯಳು
ತನ್ನೆದೆಯ ಗೂಡೊಳಗಿಟ್ಟಳು.

ಚಂದ್ರಚುಂಬಿತ ಯಾಮಿನೀ

ಅಲ್ಲಿ ಹಕ್ಕಿಯು ಹಾಡಿತು;
ಮೋಹೆಂಥ ಚೈತ್ರವ ತಂದಿತು!
ಬಾಳನೆಂತದು ರಮಿಸಿತು!
ಹೊಸ ನಚ್ಚ ಮೋದವ ತೋರಿತು!

ಅದಕೆ ಅವಳಸು ಮಿಾಸಲು —
ಅದು ಹಾರಿಹೋಗದ ತೆರದೊಳು
ಸ್ನೇಹಮೋಹದ ಸರಳೊಳು
ತನ್ನೆದೆಗೆ ಪಂಜರ ಬಿಗಿದಳು.

ಹುಚ್ಚಿ, ಒಲುಮೆಗೆ ಬಂಧವೆ?
ಅದ ಸೆರೆಯು ಕೊಳುವುದು ಸುಲಭವೆ?
ಬಯಸಿದೆಡೆಗದು ಪರಿವುದು,
ಸರನೆದೆಯ ಪಾಳಂಗೈವುದು.

ಬಾಳ ಸಾರವ ಶೋಷಿಸಿ
ಹೊಸ ಬಯಕೆ ಬವಣೆಯು ತೋರಿಸಿ
ನುಸುಳಿದೊಲುಮೆಗೆ ಶಂಕಿಸಿ
ತಾ ಮಿಡುಕುತಿಹಳಾ ಮಾನಿಸಿ.

ಇಂದುರಂಜಿತ ಯಾಮಿನೀ
ಸುಖಿಜನರ ಚಿತ್ತಾಹ್ಲಾದಿನೀ;
ಗಾನಗೈವಳು ಕಾಮಿನೀ;
ಆ ವಾಣಿ ಹೃದ್ವಿದ್ರಾವಿಣೀ:

ಒಲುಮೆ ದಾಳಿಯನಿಡಲು ಜಗ್ಗದ
ಹೃದಯವುಂಟೇ ಮನುಜಗೆ?
ಒಲವ ಸೆರೆಯನು ಕೊಳುವ ಬಲ್ತ್ರಿಯ
ಹೃದಯವುಂಟೇ ಮನುಜಗೆ?

# ಹಿಮ್ಮಾಗಿಯ ಮಾಂದಳಿರು

ರಾಜ್ಯನೀಗಿ ಪಲಿತ ಮಾಗಿ
ನಡೆದ ವಾನಪ್ರಸ್ಥನಾಗಿ;
ಹೇಮಂತ ತಪಸ್ಸಾರ
ಚೈತ್ರ ಗಾದಿಗಿನ್ನೂ ಬಾರ;
ಅಂಥ ಸಂದಿಗ್ಧ ಸಮಯ.
ಆಳ್ವರಿಲ್ಲದಿಳೆಯ ಪರಿಯ-
ನೆಂತು ಪೇಳ್ವೆ? ಬಾನೊ ಬಯಲು,
ಶಿಶಿರಶರಣವಾದ ನೆಳಲು,
ದಹನನಿಪುಣ ಕಠಿನತಪನ,
ನೀರಸತರು ನಿಬಿಡ ವಿಪಿನ,
ಹಸುರ ಹೆಸರ ಕಾಣದಿರುವ
ನೆಲವು, ಕಜ್ಜವಿಲ್ಲದಲೆವ
ಅಲಸ ತುಂಟ ಬಂಟ ಗಾಳಿ —
ಇಂತಿಳೆ ನಿರ್ವೇದ ತಾಳಿ
ಒಂದು ಬೇನೆಯೊಳಗಿರಲ್ಕೆ;
ಅಚರಜೀವ ಸೇರಿರಲ್ಕೆ
ನಿದ್ದೆಚಿಪ್ಪ; ತೋಪಿನೊಳಗೆ,
ರಸವಿಹೀನ ಮಾವಿನೊಳಗೆ —
ಮಧುವಿನೊಲುಮೆಗನಸು ಸುಳಿದು
ಮರದ ಜಾಡ್ಯವನ್ನು ತಿವಿದು
ತನ್ನ ಹಾಸವೊಂದನಿಳಿಸಿ
ಮಾಯವಾದ ಪರಿಯ ನೆನೆಸಿ —

ಹಿಮ್ಮಾಗಿಯ ಮಾಂದಳಿರು

ತರಳ ತಳಿರ ಗೊಂಚಲೊಂದು,
ಒಂಟಿಯಾಗಿ, ನೋಡಲೊಂದು
ಚೋದ್ಯವಾಗಿ, ಕುಣಿಯುತಿತ್ತು.
ನೋಟ ಕಟ್ಟಿತೆನ್ನನು.

ಇಂತಾ ಜಡಲೋಕದಲ್ಲಿ,
ಸುಸ್ಥಿರ ಚಿರ ಶೂನ್ಯದಲ್ಲಿ,
ತನ್ನ ಹರುಷವೊಂದನರಿತು,
ಸುತ್ತಣಂದಿನಿರವ ಮರೆತು,
ದಿಟ್ಟ ಮುಗುದ ಮಗುವಿನಂತೆ
ಭಯದ ಲೇಶವಿಲ್ಲದಂತೆ,
ವನದ ನೀರಸತ್ವ ಹರಿವ
ತೀರ ಮುನ್ನ ಎದ್ದು ಸಲಿವ
ತಳಿರ ತೊಂಗಲನ್ನು ನೋಡಿ
ಮನದೊಳೊಗೆದ ಭಾವವೋಡಿ-
ಗಿಂತು ನಾನು ರೂಪುಗೊಟ್ಟು
ನುಡಿದೆ: "ಆವ ಪಂಥ ತೊಟ್ಟು,
ಕಿಸಲಯಶಿಶು, ಜನ್ಮವಡೆದೆ?
ಆರ ಆಣೆಯಿಂದ ಚಿಗಿದೆ?
ಆವ ಶಿವದ ಬೇಹುಗಾರ?
ಆವ ಕಣಸಿನೋಲೆಕಾರ?
ಆವ ಜೋಯಿಸವನು ಜಗದಿ
ಸಾರ ಬಂದೆ ನೀನು ಜವದಿ?
ಸುತ್ತ ಶೂನ್ಯ ಕಾಣದೇನು?
ಶ್ರಾಂತಮೌನ ಕೇಳದೇನು?
ಇಂಥ ತಮದ ಹೊರಳಿಯಲ್ಲಿ

ಎದ್ದು ಮುದ್ದು ನಗೆಯ ಚೆಲ್ಲಿ
ಸರ್ವೋದಯದ ಕಣಿಯ ನೀನು
ಸಾರೆ ವ್ಯರ್ಥವಾಗದೇನು?
ಜೋಕೆ, ಜೋಕೆ, ಚೂತಡಿಂಭ,
ನಿನ್ನ ಕಂಡರಯ್ಯೊ ಎಂಬ
ಒಬ್ಬ ಕೂಡ ಇಲ್ಲದಿಂದು
ನೀನು ನನ್ನಿ ಬೆಳಕ ತಂದು
ತಮವ ಕೆಣಕೆ ಮುಳಿವುದೇನೊ?
ನಿನ್ನ ತುತ್ತುಗೊಂಬುದೇನೊ
ವನದ ನೀರಸತ್ವ?— ಜೋಕೆ!"
ಎಂದು ಮೂಡಿದೊಂದು ಭಯಕೆ
ನುಡಿಯ ನೀಡಿ ನಡೆದೆನು.

ಮರುದಿನ ನಾ ತೋಪಿನೊಳಗೆ
ಹೋಗುತಿರಲು, ಮರದ ಕಡೆಗೆ
ದೃಷ್ಟಿ ಹೊರಳೆ, ಚಕಿತನಾಗಿ
ಕಂಡೆ, ಸುರುಟಿ ಸುಂಡಿ ಹೋಗಿ
ಜೋಲು ಬಿದ್ದ ಮಾಂದಳಿರ.
ಹುಟ್ಟಿ, ಅರಿಯದಿದ್ದ ಸ್ಥವಿರ
ಮಾವು, ಕಂದನಳಿವನರಿತು
ಕೊರಗುವಂತೆ ತೋರುತಿತ್ತು.
ಬಂಜೆಬಾಳೆ ತನಗೆ ನಿಯತಿ-
ನಿಯಮವೆಂದು ಇದ್ದ ಪ್ರಕೃತಿ
ಇಂದು ಸತ್ವವರಿತ ಕುತ್ತು
ವನದೊಳೆದ್ದು ಕಾಣುತಿತ್ತು.
ಅರಿತ ಶೂನ್ಯ ಮರೆತ ಶೂನ್ಯ-

ಕಿಂತ ಹೆಚ್ಚು ಭೀಮಶೂನ್ಯ-
ವಾಗಿ ಭಯವ ಬೀರುತಿತ್ತು.
ನನ್ನಿ ತೋರೆ ತಸುವ ತೆತ್ತು
ತಾರಿ ಆರಿಹೋದ ಚಿಗುರ
ಕಂಡು ನಾನು, ದುಗುಡ ಹಗುರ-
ವಾಗಲೊಂದು ಬಗೆಯ ನಗೆಯ
ನಕ್ಕು — ಭಾವವೇನೊ ಅರಿಯ-
ಲಾರೆ; ಶಕುನ ಫಲಿಸಿತೆಂದೊ,
ನಿಯತಿ ನೀತಿ ಇಂತೆ ಎಂದೊ,
ಇಂಥ ಅಳಲ ನುಡಿಯೆ ನಗೆಯೆ
ತಕ್ಕುದೆಂದೊ, ಏನೊ ಅರಿಯೆ —
ಅಂತು ನಕ್ಕು, ತಳಿರಿಗೊಂದು
ಚರಮಗೀತ ಹಾಡಲೆಂದು
ಬಯಸಿ, ಇಂತು ನುಡಿದೆ ನಾನು:

"ಹೇ ಮುಕ್ತ ಚೂತಸೂನು,
ಅರಿವುಗೆಟ್ಟು ಭ್ರಾಂತವಾದ,
ಕರಣವುಡುಗಿ ಶ್ರಾಂತವಾದ
ಉದಾಸೀನ ಲೋಕದಲ್ಲಿ,
ನೀರಸತ್ವದುಲ್ಬದಲ್ಲಿ
ಮಧುವು ರೂಪುಗೊಂಬ ಶುಭದ,
ನವೋದಯವು ಬೆಳೆವ ಶಿವದ,
ಸುದ್ದಿ ಸಾರೆ ತುಡಿದುಕೊಂಡು,
ಸುಪ್ತವನದಿ ಜನುಮಗೊಂಡು —

"ವಿಷಯ ಸುಖದ ಅಮಲಿನಲ್ಲೊ,
ಮುದದ ನೆಳಲ ಬೇಟೆಯಲ್ಲೊ,

ಭವದಿ ತೊಳಲಿದಳಲಿನಲ್ಲೊ,
ಅಜ್ಞಾನದ ಜಾಡ್ಯದಲ್ಲೊ,
ಬಳಲಿ ಕೆಡೆದ ಲೋಕದೊಳಗೆ —
ತಾನು ಕಂಡ ಶಿವದ ನೆಲೆಗೆ
ಪ್ರಗತಿರಥವನೆಳೆಯೆ ತುಡಿದು
ತ್ಯಾಗ ತಪದ ಹಗ್ಗ ಹಿಡಿದು
ಭೇರಿ ಹೊಡೆದು ನಿಲುವ ಧೀರ
ಕರ್ಮಶೂರ ಕಣಸುಗಾರ
ಆತ್ಮವಂತ ಯೋಗಿಯಂತೆ,
ತಪೋವಂತ ಚಾಗಿಯಂತೆ —

"ದೂರ ದೂರ ದೂರದಲ್ಲಿ
ಪುಣ್ಯಲಬ್ಧ ದೃಷ್ಟಿಯಲ್ಲಿ
ಕಂಡ ಕಣಸ, ಮಂದಿ ಮುಂದು-
ವರಿದು ಕಾಂಬ ಮುನ್ನ, 'ಇಂದು
ಭಾವಗೀತಗಳಲಿ ಹಾಡಿ
ತೋರ್ಪೆ'ನೆಂದು ಪಂಥ ಹೂಡಿ
ಭಾವಸೋಮಮತ್ತನಾಗಿ
ಬರುವ ಕವಿಗೆ ಸಾಟಿಯಾಗಿ —

"ದ್ವೇಷ ರಾಗ ರತಿಯ ನೆರೆಯ,
ಅಹಂಕಾರಕೆಸರ ಹೊರೆಯ
ಬಾಳಹೊನಲ ಸನಿಯ ಕಂದು
ಹಾದಿಕಾರನಾಗಿ ಬಂದು,
ತನ್ನ ತೃಷೆಯ ತಣಿಸೆ ಬಯಸಿ,
ಕೆಸರ ಕಂಡು ಕುಡಿಯ ಹೇಸಿ,
'ಹೊನಲು ತಿಳಿದ ಮೇಲೆ ಬರುವ'

ಎಂದು ದೇವ ದಾಟಿ ನಡೆವ
ಒಂದು ಗಳಿಗೆಯೊಳಗೆ ಜಲದಿ
ಸುಳಿವ ಅವನ ಸೆಳಲ ತೆರದಿ —

"ಎನ್ನ ಅರಿವ ಬಯಲಿನೊಳಗೆ
ಭಯದ ಕಾರಮುಗಿಲು ಮುಸಗೆ,
ಆಸೆ ಪವನ ಬೀಸುತಿರಲು,
ಮುದದ ಮಿಂಚು ಮಿಂಚುತಿರಲು,
ಅಳಲ ಗುಡುಗು ಗುಡುಗುತಿರಲು,
ಕ್ರಾಂತಿ ಶಾಂತಿಯುಪ್ಪ ಮೊದಲು,
ನನ್ನ ಕವಿಯು ಹುಚ್ಚಸಂತೆ
ತರುವ ಭಾವದೀಪದಂತೆ —

"ನೀರಸಾಮ್ರವಸದ ಕವಿಯೆ,
ಸುಗ್ಗಿಬಿಂಬ, ಚೈತ್ರಶಿಖಿಯೆ,
ಒಂದು ಗಳಿಗೆ ಮೌನದಲ್ಲಿ
ಹಾಡುಗರೆದು, ತಿಮಿರದಲ್ಲಿ
ಬೆಳಕ ಸುಳಿಸಿ, ಶೂನ್ಯದಲ್ಲಿ
ಸುಗ್ಗಿಚಾಯೆ ತೋರಿ — ಇಲ್ಲಿ
ಕೊನೆಗೆ ನೊಂದು ಸಂದಿಹೋದೆ,
ತಾರಿ ಆರಿ ಮಾಯವಾದೆ.
ಹೇ ರಸಾಲತರುಕಿಶೋರ,
ನನ್ನಿಕಾರ, ಕರ್ಮವೀರ,
ಇಂದು ನಿನ್ನ ಭೇರಿ ಹೊಳಲ
ಮುಂದೆ ಕೇಳಿ, ನಿದ್ದೆ ಇರುಳ
ಮುಸುಕನೊಗೆದು, ಜಾಡ್ಯ ಸಿಗಿದು,
ನಿನ್ನ ಗುಡಿಯನೆತ್ತಿ ಹಿಡಿದು,

ನೀನು ಕಂಡ ಕಣಸ ಕಂಡು,
ನಿನ್ನ ಹಾಡ ಹಾಡಿಕೊಂಡು,
ನವೋದಯದ ಜಯಕೆ ನಡೆವ
ವನವೆ ಇಂದು ನಿನ್ನ ಅಳಿವ
ತನ್ನ ಜಾಡ್ಯ ಮೌಢ್ಯದೊಳಗೆ
ಸಾಧಿಸಿಹುದು — ಗೊತ್ತು ನನಗೆ.
ಆದರೇನು,
ಅಪ್ರಸೂನು,
ನಿನ್ನ ಬಾಳು ಸಾರ್ಥ ಬಾಳು,
ಸಾವು ಬದುಕಿಗಿಂತ ಮೇಲು.
ನಿನ್ನ ಹುಟ್ಟಿನಿಂದ ವನದ
ಬಂಜೆಬಾಳು ಬೆಸಲೆಯಾಯ್ತು;
ನಿನ್ನ ಸಾವಿನಿಂದ ಜಗದ
ಮಾಗಿ ಸೆರೆಯು ಸಡಿಲವಾಯ್ತು;
ಇಂದು ನೀನು ಕೆಡೆದ ಇರುಳೆ
ಸುಪ್ತವನದ ಉದಯವಾಯ್ತು;
ಇಂದು ಬಿಗಿದ ನಿನ್ನ ಕೊರಳೆ
ನವೋದಯದ ಕಹಳೆಯಾಯ್ತು.
ಸೋತು ಗೆದ್ದ ಧೀರ ನೀನು!
ಸತ್ತು ಬದುಕಿದಮರ ನೀನು!
ಧನ್ಯ ನೀನು,
ಮಾನ್ಯ ನೀನು!"—

ಎಂದಾ ಜಡಲೋಕದಲ್ಲಿ
ಜಾಡ್ಯದೊಡನೆ ಸೆಣಸಿ ಹೋದ,
ಸುಸ್ಥಿರ ಚಿರ ಶೂನ್ಯದಲ್ಲಿ

ನಚ್ಚ ನೂಡಿ ನಂದಿಹೋದ,
ತಳಿರ ತೊಂಗಲನ್ನು ನೋಡಿ,
ಮನದೊಳೊಗೆದ ಭಾವವೋಡಿ-
ಗಿಂತು ನಾನು ನುಡಿಯ ಸೀಡಿ,
ಚರಮಗೀತವೊಂದ ಹಾಡಿ,
ಮನೆಗೆ ನಡೆದೆ ಮೆಲ್ಲನೆ—
ಮನದಿ ಮರುಗಿ ಮಣ್ಣನೆ.

# ನವೋದಯಂ

ದಾನವಹೃತ ಮೇದಿನಿಯಂ
ದಂಷ್ಟ್ರಾಗ್ರದೊಳಿರಿಸಿ,
ಭೂದಾರಂ ಪಾತಾಳವ-
ನುಳಿದೆದ್ದನೊ ಎನಿಸಿ,
ದೂರದಿಗಂತದೊಳೊಪ್ಪಿದೆ —
ರವಿ ಮಂಡಿತ ಶೃಂಗಂ,
ನೀಲಾಚಲಮುದ್ದೀಪಿತ
ಪೂರ್ವೋದಧಿಸಂಗಂ.

ಕನ್ನೆಯ ನಿದ್ದೆಯು ಸಡಿಲಲು
ಮುತ್ತಿಟ್ಟನೊ ಧೀರಂ!
ಹೊಲ್ಲಳ ಶಾಪಂ ತೊಲಗಿತೊ
ಬಹುಗಾಢ ಗಭೀರಂ!
ಚಿನ್ಮುಖಮಾಯಿತೊ ಲೋಕಂ,
ಉಕ್ಕುಕ್ಕಿತೊ ಹರ್ಷಂ!
ಸೋಜಿಗಮೇನೆಸಗಿಹುದೊ
ಇನಕರ ಸಂಸ್ಪರ್ಶಂ!

ಮಿಸುಮಿಸುಗಿದೆ ಪಸುರ್ಮುಡಿಯೊಳು
ಮಂಜಿನ ಹರಳುಹನಿ;
ಪಿಸುಮಾತೊಲು ದೆಸೆ ದೆಸೆಯೊಳು
ಹಬ್ಬಿದೆ ಎಲೆಯ ದನಿ;

ಚಿಲಿಪಿಲಿ ಹಾಡಿಗೆ ಗುಬ್ಬಿಯು
ಥಕ ಥೋಂ ಧಿಕ್ಕಿಟ್ಟಿ;
ಏನೀಕ್ಷಿಸಲಿಂತರಳಿದೆ
ತಾವರೆ ಹೂದಿಟ್ಟಿ!

ದಿನ ದಿನದಂತಲ್ಲೀ ದಿನ—
ನವಸುಂದರವೆಲ್ಲಂ;
ಹೊಸ ಸೃಷ್ಟಿಯು ಕನಸೊಂದನು
ಬಗೆಗೊಂಡನೊ ಸಲ್ಲಂ—
ಈ ಖಗವೀ ಮೃಗವೀ ನಗ-
ಏೀ ವನ ಕಂದರವಂ,
ಮಂಜುಳನಾದಿನಿ ಧುನಿಯಂ,
ಸ್ವರ್ಣಾರುಣ ನಭವಂ.

ಪಗಲಂ ಈ ಜೆಂಬೆಳಕೊಲು—
ಆವುದೊ ಅನುರಾಗಂ,
ಎಲರಂ ಈ ಸೌರಭದೊಲು—
ಆವುದೊ ಅನುಭೋಗಂ,
ಬಗೆ ಬೆಳಗಿದೆ, ಮುಸಕಾಗಿದೆ—
ಅಂದಿನ ದಿನದಂತೆ,
ಮೋಹನನೆನ್ನಂ ಮೋಹಿಸಿ
ರಾಸಕೆ ಕರೆದಂತೆ.

# ಹೊನಲ ಹಾಡು

ಸ್ಥವಿರ ಗಿರಿಯ ಚಲಸದಾಸೆ,
ಮೂಕ ವಸದ ಗೀತದಾಸೆ,
ಸೃಷ್ಟಿ ಹೊರೆಯ ಹೊತ್ತ ತಿರೆಯ
ನಗುವಿನಾಸೆ ನಾ.
ಬಾಳ್ವೆಗೆಲ್ಲ ನಾನೆ ನಚ್ಚು,
ಲೋಕಕೆಲ್ಲ ಅಚ್ಚುಮೆಚ್ಚು,
ನಾನೆ ನಾನೆ ವಿಧಿಯ ಹುಚ್ಚು,
ಹೊನಲ ರಾಣಿ ನಾ.

ಕಿರಣ ನೆಯ್ದ ಸರಿಗೆಯುಡಿಗೆ,
ಇರುಳು ಕೊಟ್ಟ ತಾರೆತೊಡಿಗೆ,
ಇಂದುಕಳೆಯ ಹೂವೆ ಮುಡಿಗೆ–
ದೇವಕನ್ಯೆ ನಾ.
ಬೆಳ್ಳಿನೊರೆಯ ನಗೆ ನಗುತ್ತ,
ತೆರೆಯ ನಿರಿಯ ಚಿಮುಕಿಸುತ್ತ,
ಕಡಲ ವರಿಸೆ ತವಕಿಸುತ್ತ,
ನಡೆವ ವಧುವೆ ನಾ.

ನಲಿತ ಕುಣಿತವೆನ್ನ ಶೀಲ,
ಚಲನವೆನ್ನ ಜೀವಾಳ,
ಲುಪ್ತವಾಗೆ ದೇಶಕಾಲ
ಎನ್ನ ಗಾಯನಾ.
ದಡದ ಗಿಡಕೆ ಪುಷ್ಪಹಾಸ,
ನನಿಯದಿಳೆಗೆ ಸಸ್ಯಹಾಸ,
ಹಾಸಕೀರ್ಣ, ಹಾಸಪೂರ್ಣ,
ಎನ್ನ ಜೀವನಾ.

## ಹೊನಲ ಹಾಡು

ಹೂವಿನಾಸೆಯನ್ನು ತೋರಿ
ಎಲೆಯ ಕಣ್ಣನೀರ ಕಾರಿ
ರೆಂಬೆಯಡ್ಡಗಟ್ಟಿ, ಹಳುವು
ಅಡೆ ಕರೆವುದು ;
ಬೆಟ್ಟ ಮುದ್ದುಮಾಡಲೆಂದು,
ಮಡುವು ಹಾದಿ ತಂಗಲೆಂದು,
ಕಡಲು ಒಲುಮೆ ಸಾಲದೆಂದು —
ನನ್ನ ತಡೆವುದು.

ನಾನು ನಿಲ್ವುದೊಂದೆ ಚಣಂ
ಸತತಕರ್ಮವೆನ್ನ ಗುಣಂ
ಅದಕೆ, ಕಾಣೆ ಗೋಳನಣಂ
ಹರ್ಷಮೆನಗೆ ಚಿರಂತನಂ.

ಗವಿಗಳಲ್ಲಿ ಹುಳ್ಳನಡಗಿ
ಬಂಡೆಮೇಲೆ ಹವ್ವನೆರಗಿ
ಮಡುವಿನಿಂದ ಮೆಲನೆ ಜರುಗಿ
ಕಡಲಿಗೋಡುವೆ ;
ಬಿಸಿಲಕೋಲ ಹಿಡಿದು ಹತ್ತಿ
ನೀರ ತೇರನೇರಿ ಸುತ್ತಿ
ತಿರುಗಿ ತಿರೆಯ ಮಡಿಲಿನಲ್ಲಿ
ಧುಮುಕಿ ಹರಿಯುವೆ.

ಮೂಂದೞರು

ಅಚರ ಜಗದ ಚಲಸದಾಸೆ
ಮೂಕ ಜಗದ ಗೀತದಾಸೆ
ನಿಯತಿ ನಿಯಮ ನಿಯತ ಜಗದ
ನಗುವಿನಾಸೆ ನಾ.
ವನವಿನೋದ, ಮಲೆಯ ಮೋದ,
ಮುಗಿಲ ಮೇಲ್ಮೆ, ನಾಡ ಸಲ್ಮೆ,
ನಾನೆ ನಾನೆ ದಿವದ ಕೂರ್ಮೆ —
ಪೊಸಲ ರಾಣಿ ನಾ.

# ಮೀನಕನ್ಯೆ

ಚಾರು ಶಾರದ ಸಂಧ್ಯೆ.
ನೀರ ನೀಲಾಕಾಶ
ಪೇರಾಳದರ್ಣವವ ಹೋಲುತಿತ್ತು.
ಜಲಸಸ್ಯ ನಿವಹದೊಲು
ಜಲದವಂಚಿನೊಳಿತ್ತು,
ಎಳೆಯು ಪೆರೆ ಪಾತಾಳಯಾನದಂತೆ.

ಬಾನಿನಂತರದಲ್ಲಿ
ಮೀನಂತೆ ತೇಲಿದುವು
ವೈನತೇಯುಗಳೆರಡು ಗರಿಯಲುಗದೆ.
ಅಡಿಯೊಳಗೆ ನಾನಿದ್ದೆ
ಕಡಲ ಕರುಮಾಡದೊಳು
ಬಿಡುವಿಗೆಳಸುವ ಮೀನಕನ್ನೆಯಂತೆ.

"ಮೇಲೆ ಮೇಲೇರುತ್ತ
ನೀಲಸೀಮೆಯ ಮೀರೆ
ಲೀಲೆಯಿಂದೋಪನನು ಸೇರಲಳವು.
ಈಯಾಸೆ ಹುಚ್ಚಲ್ಲ,
ಆಯಾಸವೆನಿತಿಲ್ಲ,
ಕಾಯುವೂ ನೆರವಿದಕೆ" ಎಂದಿತೊಲವು.

ಬಾಳುಬಾಳನು ಹಾಯ್ದು
ಬಾಳ ನಚ್ಚನು ಹೊಯ್ದು
ಕಾಳೋರಗಾಮಿಯೊಲು ನೆಸಹು ನುಸುಳಿ,
"ನೀ ತಿರಸ್ಕೃತೆ, ಅದಕೆ
ಈ ತೆರದ ಬಾಳಾಯ್ತು,
ಏತಕೀ ಬಯಲಾಸೆ ನಿನಗೆಂ"ದಿತು.

ಎಂಥ ಕುಲ, ಎಂಥ ಚಲ,
ಎಂಥ ಮೋಹಕ ಕಾಯ,
ಎಂಥ ಕರಣದ ದೌತ್ಯ, ಮನದ ಮಂತ್ರ!
ಅಂತರಂಗಕೆ ಸಲ್ಲೆ
ಎಂಥ ನೋಂಪಿಯ ನೋಂತು
ಇಂತಿದೆಲ್ಲವ ಪಡೆದೆ! ಎಂತು ವ್ಯರ್ಥ!

ಚಾರು ಶಾರದ ಸಂಧ್ಯೆ.
ನೀರ ನೀಲಾಕಾಶ
ಪೇರಾಳದಬ್ಧಿಯನು ಹೋಲುತಿತ್ತು.
ಆ ಮಹಾರ್ಣವ ತಲದಿ
ಕಾಮಹತ ನಾನಿದ್ದೆ
ಪ್ರೇಮವಂಚಿತ ವಿಲಾಸಕನ್ಯೆಯಂತೆ.

## ಕೊಳದೆಡೆಯ ಇರುಳು

ಬುವಿಬಾನಳೆದುರವಣಿಸಿದ
ಹರಿಪಾದಕೆ ತಲೆಯೊಡ್ಡುತ
ಕೆಳಲೋಕಕೆ ತೆರಳುತ್ತಿಹ
ಬಲಿದೊರೆಯಂದದೊಳು,
ಮುಗುವಿರುಳಿನ ನಿಡು ಸೀಟಿದ
ದೆಸೆ ಮುಟ್ಟಿದ ಮುಗಿಲಡಿಯಡಿ
ಮರೆಯಾದುದು ಪಗಲೈಸಿರಿ
ಪಡುವಣ ಕವುರಿಯೊಳು

ಹಿಮವದ್ಗಿರಿಗಹ್ವರದೆಡೆ
ತಪವೆಸಗುವ ವರಯೋಗಿಯ
ನಿಶ್ಚಲ ಕಿಂಚಿನ್ಮೀಲಿತ-
ಫಾಲಾಂಬಕವೆನಲು,
ಬೆಳ್ಮಿಂಚಿನ ಕರಿಮುಗಿಲಿನ
ಸಡುವಣ ಬಾನಿನ ನೆತ್ತಿಯೊ-
ಳೆಂತೊಪ್ಪಿದೆ ಹೊಂಬಣ್ಣದ
ಬಿದಿಗೆಯ ಪೆರೆಯೆಸಳು.

ಚಣ ಚಣಕೂ ಮಿರುಮಿಂಚುವ
ಕೋಲ್ಮಿಂಚಿನ ಸಂಚೇನಿದು —
ತಪ ಭಂಗಕೆ ಕುಸುಮಾಸ್ತ್ರವ-
ನಣಿಗೈವನೊ ಮಾರಂ?
ಚಣ ಚಣಕೂ ಕಿವಿಗಿಸಿದೆನೆ
ಗುಡುಗುಡುಗುವ ದನಿಯೇನಿದು —
ಸಿಂಗಾಡಿಗೆ ಹೆದೆಯೇರಿಸಿ
ಮಿಡಿವನೊ ಎದೆಗಾರಂ?

ಕಣ್ಮನಗಳ ನೀರಡಿಸುವ
ನಿಶ್ಯಾಂತಿಯು ಈ ಇರುಳೊಳು
ಉತ್ಸುಕಿಸಿಹೆ, ಕಾತರಿಸಿಹೆ,
    ಭಾವುಕ ಕತಮೋನ್ಯ?
ಕಣ್ಣೋಲಲು ಸಿಟ್ಟಿಸುವೇ
ಕಿವಿ ಸೋಲಲು ಲಾಲಿಸುವೇ
ಬಗೆ ಸೋಲಲು ಭಾವಿಸುವೇ
    ಭ್ರಾಂತಿಯು ಒಗಯೋಸ್ಮ?

ನೇವ್ರರದಿಸಿದಸಿ ಯಾವ್ರದ
ಸೂಡಿದ ಪೂಗಂಪಾವ್ರದ
ನೋಟದ ಕುಣಿಪಿಂಚಾವ್ರದ
    ಸ್ಮೃತಿಧಸುಪಿಂದೊಗೆದು,
ಸಿನ್ನೆದೆಗಪಿಯೊಳಗಿಂತೆಯೆ
ತಪಿಪ ಸಿರಾಶೆಯ ರುದ್ರುಸ
ಎಚ್ಚರಿಸುತ, ಒಲವಾವ್ರದು
    ಬೇಳುವೆಯಾಗಿಹುದು?

# ಕಾರ್ತೀಕ

ಕನಸಿಗರಿಗೆ ಮಾಸವೇಕ
ಕಣಸುತರುವ ಕಾರ್ತೀಕ!
ನಿಯತಿ ತನ್ನ ಬಿಡುವಿಗೆಂದು
ಮೀಸಲಿಡುವ ಕಾಲವಿಂದು.

ನಿಗಿ ನಿಗಿ ನಿಗಿ ನಗುವ ಹಗಲು,
ಝಗಿ ಝಗಿ ಝಗಿ ಝಗಿಸುವಿರುಳು.
ಬಹು ಮನೋಜ್ಞ ಲಲಿತ ಮಧುರ-
ರಾಗ ರಚಿತ, ಭಗಣರುಚಿರ
ಭಾವದೀಪ್ತ ಸಂಧ್ಯೆ!—ಇಂತು
ಮುಡಿಸೆನಿದಿರ ಚೆಲುವ? ಕಂತು
ತನ್ನ ತೋಷಕಿರವಗೊಡಲು
ತಾನೆ ಕುಂಚ ಹಿಡಿದನೆನಲೆ?

ಅತ್ತ ಇತ್ತ ಸುತ್ತ ಸುಳಿದು,
ಹರಳ ಚೆಲ್ಲಿ, ಹೊನ್ನ ಕಳೆದು,
ಹೋದಳೆನಲೆ ಅಪ್ಸರಸಿ
ಇನಿಯನರಸಲವಸರಿಸಿ?

ಅಗೋ ನೋಡು! ಗೊಲ್ಲ ಹುಡುಗ,
ಕೋಡ ತುದಿಯನೇರಿ ನಿಂತು,
ಸ್ಪರ್ಶಮಣಿಯ ಮಾಟದಂತೆ
ನಿತ್ಯದಿಳೆಯ ಚೋದ್ಯವೆನಿಪ
ಸಂಜೆ ರವಿಯ ಸ್ವರ್ಣಕಾಂತಿ-
ಗೊಡ್ಡಿ ತನುವ, ಹೋ ಹೋ
ಎಂದು ಕುಣಿದು, ಮೇರುಗಿರಿಯ
ಶಿಖರವಡರಿ ವಿಹರಿಸಮರ-
ಕುವರನನ್ನೆ ಹೋಲುತಿಹನು!

ಇಗೊ! ಪುರಂಧ್ರಿಕಾಮ್ಯವಾದ
ಸೋಪಾನರಮ್ಯವಾದ
ಸರಸಿಯೊಳಗೆ, ಕಿರು ಕಿರುದೆರೆ,
ಮುಗಿಲ ರಂಗನೆರಚಿಯಾಡಿ,
ವೃದ್ಧಸಪಿನಸೆಳೆಯುರಂತೆ
ಗುಡಿಯ ನೆಳಲ ಗೋಳವಾಡಿ,
ಗೆಲುವುಗೊಂಡು ಸರಿಯುತಿರಲು;
ನೀರಿಗೆಂದು ಬಂದ ಬಾಲೆ
ತನ್ನ ಕಾಲನಿಳಿಯಬಿಟ್ಟು,
ತಂದ ಕೊಡವ ಮುಳುಗಿಸಿಟ್ಟು,
ಪಡುವದೆಸೆಗೆ ದಿಟ್ಟಿಯಿಟ್ಟು,
ಅಲ್ಲಿ ಸಂಜೆ ಮುಗಿಲಿನೊಳಗೆ—
ತನ್ನ ಹೃದಯದಾಳದಲ್ಲಿ
ಭಾವರಾಗದುಲ್ಬದಲ್ಲಿ
ತನಗೆ ತಾನು ತಿಳಿಯದಂತೆ
ರೂಪುಗೊಳ್ಳುವೊಲುಮೆಯಂತೆ—
ಮೆಲ್ಲ ಮೆಲನೆ ಕಳೆಯುಕೊಂಡು
ಸ್ಪಷ್ಟವಾಗುತಿರುವ ಚಂದ್ರ-
ಲೇಖೆಯನ್ನು ಕಂಡು, ಇಂದು
ಆವುದೋ ಕನಸಿಗಾಗಿ
ಆವುದೋ ಬಯಕೆಗಾಗಿ
ಉತ್ಸೇಕಗೊಳ್ಳುತಿರುವ
ಬಗೆಯ ಚೆಂದವನ್ನು ನೋಡು!

ಒಡತಿ ಬರುವ ಬೇಗ ಕೊಡಲು
ಮಿಂಚಿ ಮುಂಚೆ ಹೋಪಳೆನ್ನೆ,

## ಕಾರ್ತೀಕ

ಪಡುವಲಾಚೆ ಸಂಜೆ ಸಾಗೆ,
ಜಗವೆ ನಿಶ್ಶಬ್ದವಾಗೆ —
ಕೃತ್ತಿಕೆಗಳ ತಿಲಕವಿಟ್ಟು
ರೋಹಿಣಿ ಮೂಗುತಿಯ ತೊಟ್ಟು
ಮಾರ್ಗಶೀರ್ಷ ಪದಕ ಝಗಿಸೆ
ಪುನರ್ವಸುವೆ ಕಾಂಚಿಯೆನಿಸೆ
ಮುಕ್ಕ ಚುಕ್ಕಿ ಥಾಳಿಸಿಂದ
ತನ್ನದೊಂದು ರೀತಿಯಿಂದ
ಪೆರೆಯ ಸೊಡಲ ಬೆಳಕಿನಲ್ಲಿ
ಮಂದ ಮಂದ ಗಮನದಲ್ಲಿ
ಬಾನ ಪಜ್ಜೆಗೈತರುವ
ಇರುಳ ಚೆಲುವನೆಂತೊರೆವ!

ಇಂದು ಹುಣ್ಣಿಮೆಯ ಹಬ್ಬ.
ನವ್ಯ ಶುಭ್ರ ಚಂದ್ರಹಾಸ
ತಿರೆಯುರವನು ನಾಕದೊಂದು
ಕನಸಿನೊಳಗೆ ತೇಲಿಸಿಹುದು.
ಆಗೋ! ಮೇಲೆ, ದೂರದಲ್ಲಿ —
ಚಕ್ರವಾಳದಂತರದೊಳು,
ಲೆಕ್ಕವಿಲ್ಲದಷ್ಟು ಸೊಡರ
ಹೊನ್ನ ಹೊಗರ ದಳಗಳಿಂದ,
ಗೋಪುರಾಂತ ದೀಪ್ತವಾಗಿ
ಮಲೆಯ ತುದಿಯ ಗುಡಿ ಅದೊಂದೆ
ಕಾಣುತಿಹುದು ಮೂಡಲೊಳಗೆ
ಬೆಳುದಿಂಗಳ ಪಾಲ್ಗಡಲೊಳು —
ಮುನ್ನ ಅವ್ಯಕ್ತದಿಂದ
ಘನಶ್ಯಾಮನಾಭಿಯಿಂದ

ಮೊಳೆಯುತಂದೆ ಬಿರಿಯುತಿರುವ
ಶತ ಶತ ದಳ ಕಮಲದಂತೆ.

ರವಿಲೋಕ ಪ್ರಜೆಗಳಿಂತು
ಹರಕೆ ಹೊತ್ತು ಪರಿಸೆಗೊಂಡು
ಜಾತ್ರೆಯಾಗಿ ಇಳಿದು ಬಂದು
ಗುಡಿಯೊಳಿಂತು ನೆರೆದರೆನಲು —
ಎಲ್ಲೆಲ್ಲು, — ಹೊಸಿಲ ಮೇಲೆ
ಗೂಡಿನೊಳಗೆ ಜಗುಲಿ ಮೇಲೆ
ಕೈಸಾಲೆ ಕಂಬದಲ್ಲಿ
ಹಂತದಲ್ಲಿ ಗುಳಿಗಳಲ್ಲಿ
ಬೃಂದಾವನದ ಸುತ್ತ
ದೇವಸಿದಿಪು ಸುತ್ತಮುತ್ತ
ಸೊಡಲಮಲ್ಲಿಯಂಜಲಿಯೊಳು
ರಂಗವಲ್ಲಿಯಾರತಿಯೊಳು,
ತೂಗಿ ಬಾಗಿ ಕುಡಿಯ ಮೆರೆಸಿ
ಇದೇ ಸುವರ್ಲೋಕವೆನಿಸಿ
ಬೆಳಗುತಿಹುದು ದೀಪಮಾಲೆ.

ಉಚ್ಚನೆನದೆ ನೀಚನೆನದೆ
ಪೌರವೃದ್ಧರೊಂದುಗೂಡಿ,
ಅಂಜಲಿಯೊಳು ಹಣತೆಯಾಂತು,
ಮಂತ್ರಪೂತ ಆಜ್ಯದೀಪ-
ದಾರತಿಯನು ಮುಂದೆ ಕೊಂಡು,
ವೇದಘೋಷ ಘೋ ಎನ್ನೆ,

ಘಂಟಾರವ ಶಿವೋಮೆನ್ನೆ,
ಶಂಖಸ್ವನ ಮೊಗೆಯುತಿರಲು,
ದುಂದುಭಿಗಳು ಮೊಳಗುತಿರಲು,
ತಾಳ ಮೇಳ ಮೇಳವಿಸೆ —
ತನ್ನ ಸತ್ವವರಿವ ಜೀವ
ಮುಕ್ತಿಯಂತ್ಯ ನಿವೇದನವ
ಹಾ ಹೂ ಗಾನದೊಡನೆ
ಇಂತೆ ನಲಿವುದೆನ್ನುವಂತೆ —
ದೇವ ದೇವನಡಿಮಲರೊಳು
ಸೊಡಲ ನಲಿಸಿ ದೀಪನೆತ್ತೆ;

ಗುಡಿಯ ಹೊರಗೆ ಉತ್ಸವದೊಳು
ಬಿಜಯಗೈವ ದೇವನಿದಿರು,
ತೈಲಸಿಕ್ತ ಸೂತ್ರವಸನ-
ದಾಲಂಬದಲ್ಲಿ ಅಗ್ನಿ —
ತನ್ನ ತನುವನುರೆ ತಾಪಿಸಿ
ಆತ್ಮತೇಜವುದ್ದೀಪಿಸಿ
ನಿರ್ವಾಣಕೆ ಮನಮಾಡುವ
ಪರಮ ಯೋಗಿಯಾತ್ಮದಂತೆ —
ಉಜ್ಜ್ವಲಿಸಿ ಪ್ರಜ್ಜ್ವಲಿಸಿ
ಗೋಪುರಾಗ್ರಗಾಮಿಯಾಗಿ
ನೀಲ ಗಗನತಲವ ಮುಟ್ಟಿ
ತಲ್ಲೀನನಾಗುತಿರಲು;

ಸೋಜಿಗವನು ನೋಡಿ ನೋಡಿ
ಧನ್ಯ ಭಾವವಡೆದು ಮಂದಿ —

ದೀಪದರ್ಶನಾಸಂದಿ —
ಭಾವಮಾತ್ರರಾಗುತಿರುವ
ಪರಿಯುನೆಂತು ನಾವೇಳ್ವ !

ದಿಟ ದಿಟ ದಿಟ ಕಾರ್ತೀಕ
ಕನಸಿಗರಿಗೆ ಮಾಸವೇಕ !
ದೀಪದೀಪ್ತ ಕಾರ್ತೀಕ
ಜ್ಯೋತಿರ್ಮಯ ಕಾರ್ತೀಕ
ಆಸ್ತಿಕ ಕಾರ್ತೀಕ !

# ನಂದಿಯ ಬೆಟ್ಟದ ಮೇಲುಗಡೆ

ಬೇಡದೆ ಬಿಸುಡಿದ ವಸ್ತುವೊಲಾಯಿತ್ತಿಳೆ
ಕೆಳಕೆಳಗಾಳದ ಕಣಿವೆಯೊಳು ;
ಕಪ್ಪೆಯ ಗೂಡೋ, ಹುತ್ತವೊ ಇದು ಎನೆ
ನಗೆಗೇಡಾಯಿತು ನೆರೆ ಹೊಳಲು ;
ಕೆರೆಯೋ ಕೊಚ್ಚೆಯೊ, ಪೈರೋ ಪಾಚೆಯೊ,
ಹಳುವೋ ಹುಲ್ಗಾವಲ ಹರಹೋ ?
ಎನ್ನುತ ಭ್ರಮಿಸುವ ತೆರವಿಂದಾಯಿತು
ನಂದಿಯ ಬೆಟ್ಟದ ಮೇಲುಗಡೆ.

ಐರಾವತವೆನೆ ಬಿಳಿಮುಗಿಲಾನೆಯ
ನದರದಿ ಮುಟ್ಟುತ ನೇವರಿಸಿ,
ಕುಸುಮಾವಳಿಯೆನೆ ಬಾನಿನ ನೀಲವ
ಟೊಂಗೆಯ ತುದಿಯೊಳು ದೋಲಯಿಸಿ,
ಚಿರಯೌವನವೆನೆ ಹಸುರನು ಮೆರೆಯಿಸಿ,
ಜುಮ್ಮೆನೆ ಸುರಭಿಯ ನಿಃಶ್ವಸಿಸಿ,
ದನಿಯೊಳು ನೆಳಲೊಳು ಚೋದ್ಯಂಗೊಳಿಸುವ
ಬನವಿದಿಗೋ ಮಲೆ ಮೇಲುಗಡೆ!

ಕಿರುದೆರೆಕುದುರೆಯ ರವಿರಾವುತರನು
ಕೊಳದಂಗಣದೊಳಗೋಡಿಸುತ,
ಚಣಕೂ ಚೆದರುವ ಮೋಡದ ಮಂದೆಗೆ
ಬಾನಿನ ಬಯಲೊಳಗೂಳಿಡುತ,
ತಲೆ ಕೆದರುತ, ಮೈ ಕುಣಿಸುತ ತರುಗಳ
ಹುಡುಗಾಟಕೆ ಹುಯಿಲಿಡಿಸುತ್ತ,
ತಿಣ್ಣನೆ ಮಂದಿಯ ತುಡುಕುತ, ಜಡತೆಯ
ಕಸಿಯುವೆಲರ್ ಮಲೆ ಮೇಲುಗಡೆ.

ಪಗಲಿರುಳಾಗಿಸಿ ದೆಸೆಯೊಗ್ಗೂಡಿಸಿ
ಲೋಕವ ಮೋಹಿಸುತುರವಣಿಸಿ,
ಘುಡು ಘುಡಿಸುತಲಾರ್ಭಟಿಸುತ ಫಳ್ಳನೆ
ಪಲ್ಕಿರಿಯುತ ಭೀಕರನೆಸಿಸಿ,
ಬುದ್ಧನ ಮಾರನೊಲಚಲವ ತಾಗುತ
ಹಮ್ಮುಳಿದೋಡಲು ಕಾರ್ಮುಗಿಲು,
ನಗುತಿಹ ದೇವರ ದಿವ್ಯಸ್ಮಿತವೆನೆ
ಮಳೆಬಿಸಿಲಿದೊ ಮಲೆ ಮೇಲುಗಡೆ.

ಸೊದೆಯಂತಸುವನು ಬಿಸಿಲುದ್ದೀಪಿಸೆ
ಸಲಿದುಲಿದಾಡುವೆ — ಸುರಸವೊಲು ;
ಕೈಯೆಡೆ ಕೋಡೊಳು ರೆಕ್ಕೆಯಗೊಳ್ಳಲು
ಮುಗಿಲುತ್ಸುಕಿಸುವೆ — ಯಕ್ಷನೊಲು ;
ಗಿರಿಶನೊಲದ್ರಿಯ ಸಡೆವ ಮಹಾತ್ಮನ
ಹಿಂಬಾಲಿಸುವೆಸು — ಗಣರವೊಲು ;
ಅಮರ್ತ್ಯಚೇತನರನೇಕಭಾವಗ-
ಳಿಂತೆನಗಹುದೈ ಮೇಲುಗಡೆ.

ಮೆಲ್ಲನೆ ಮೆಲ್ಲನೆ ಬೆಳುದೆಸೆ ದಳಗಳ
ತಿರೆ ಹೂ ಮುಚ್ಚಲು, ಇರುಳಿಳಿಯೆ,
ಶಾಂತನ ತೇಜಸ್ವಿಯ ಸಾನ್ನಿಧ್ಯದಿ
ತಮ್ಮೊಳಬೆಳಕೊಳು ಜನವೆಸೆಯೆ,
ಶ್ರುತಿ ಸುಡಿಯಲು, ಸುತಿಯೊಗೆಯಲು, ಕರಣಗ-
ಳಮಿತಾಚರಣೆಯ ಸುತಸವೊಲು
ದಣಿದಾತ್ಮದ ಬಳಿಗೈತರೆ — ಅಹ ಏ-
ಸುತ್ಸವವೋ ಮಲೆ ಮೇಲುಗಡೆ!

# ಶರಾವತೀ ಜಲಪಾತ ನಿರ್ಘೋಷ

ಜಗವೆ ಯಾತ್ರಿಕನಾಗೆ ಚೆಲುವ ದೇವಿಗೆ ಹರಸಿ,
ಚೇತನದ ಸೌಂದರ್ಯದೀಪ್ಸಿತವ ಸಲಿಸುವೀ
ಪಾತದದ್ಭುತ ಭೀಮಕಾಂತ ಕಮನೀಯತೆಗೆ
ಬಗೆ ಸೋತುದಂತಿರಲಿ, ಕಣ್ಣಾಸೆ ಮಿಕ್ಕಿರಲಿ;

ಆಲಿಸಾದೊಡೆ, ಕೆಳೆಯ, ನಿನ್ನಾತ್ಮವರಳುವೊಡೆ,
ಈ ನದಿಯ ಚಿತ್ರತರ ಭೃಗುಪತನ ಘೋಷವನು —
ಮೌನದಳತೆಗೆ ಶಬ್ದ ಬೆಳೆಯುವೀ ಮಾಟವನು!
ಕೇಳಿ ಕಿವಿ ಬೆದರುತಿರೆ, ನಾದವಾಹಿನಿ ಎಂತು,

ದೊರೆಯ ಬಿಡುಗಡೆಗೆಂದು ನಡೆತರುವ ಪಡೆಯಂತೆ,
ಕರಣಗಳ ಜರ್ಝರಿಸಿ, ಮತಿ ಮುತ್ತಿ, ಅರಿವಳಿಸಿ,
ಸೆರೆ ಸಿಲುಕಿದಾತ್ಮವನು — ತನ್ನ ಹಿರಿಮೆಗು ಮೀರೆ—
ದೊರೆತನದಿ ನಿಲಿಸುತಿದೆ ಸೃಷ್ಟಿ ಸಿಂಹಾಸನದಿ!

ಶಶಿ, ತಾರೆ, ಜಲಧಾರೆ, ಈ ಮೋದವಿಭವದಂತೆ
ತೋರುತಿವೆ—ಘೋಷ, ಕೃತಕೃತಿಯ ಜಯಘೋಷದಂತೆ.

# ಒಂದಿರುಳು

ಪಡುವ ಮಲೆಯು ಕಣಿವೆಯಾಚೆ
ಹೊತ್ತು ಹಾರಿಹೋಗುತಿತ್ತು,
ಮೂಡ ಮಲೆಯು ಹಲ್ಲೆಹತ್ತಿ
ಇರುಳ ದಾಳಿ ನುಗ್ಗುತಿತ್ತು;
ಬಿದ್ದ ಹೊಸ್ತ ಕೊಳ್ಳಹೊಡೆದು
ಕಳ್ಳಸಂಜೆಯೋಡುತಿತ್ತು,
ತಲೆಯ ಬಾಗಿ ಪುರದ ದೀಪ
ಜೀವದೊಂದಿಗದ್ದಿತು.

ಪಾನಭೂಮಿಯಲ್ಲಿ ಮತ್ತ-
ಜನದ ಮಾತಿನಲ್ಲಿ ಚಿತ್ತ
ಗೀತಹಾಕುತಿತ್ತು ಭರದಿ
ಸೂತ್ರಕೆಟ್ಟ ಪಟದ ತೆರದಿ.
ಮದ್ಯತುಷ್ಟ ಮುದಿಯ ಚೆನ್ನ
'ಕುಡಿಲ ಕುಡಿಲ' ಎಂದು ತನ್ನ
ಮರಿಯಮಗನ ಮೂಗ ಹಿಡಿದು
ಬಾಯ ತೆರೆಸಿ, ಕಳ್ಳ ಸುರಿದು,
ತನ್ನ ಜೀವಕಾದ ನಲವ
ತನ್ನವನಿಗು ಹಂಚಿಕೊಡುವ
ಯತ್ನದಲ್ಲಿ ತೋರುತಿತ್ತು —
ವಿಕೃತ ವ್ಯಂಗ್ಯವೇಷವೆತ್ತು
ಪ್ರೇಮ, ಮನುಜ ಧರ್ಮವು.

ಭಾವವೇನು ಭಂಗಿಯೇನು
ಹಾಸ್ಯವೇನು ಲಾಸ್ಯವೇನು,
ಎಂತಂದರಂತು ತೋರಿ,
ಬವಣೆಯುಣೆಯು ಸುಣಚಿ ಜಾರಿ,
ಮರೆವುಕಿಂಡಿಯಿಂದ ದೂರಿ,
ಮುಕ್ತಿಯುನ್ಮಾದದಿಂದ
ವ್ಯಕ್ತವಾಯಿತಾನಂದ—
ಭೂತಧರ್ಮವು—ಸರ್ವ-
ಭೂತಧರ್ಮವು.

ಪಡುಬಡಗಲ ಮೂಲೆಯಲ್ಲಿ
ಕಾಳಿಯಿರುವ ತಾಣದಲ್ಲಿ
ಕಿಚ್ಚು ಇರುಳ ನೊಣೆಯುತಿತ್ತು,
ಭಯವು ಮೂಡಿ ಮಸಗುತಿತ್ತು,
ಜೀವ ಹೌಹಾರುತಿತ್ತು,
ಡುಮ್ಮು ಡುಕಿಟಿ ನಾಸ ತತ್ತು
ಎನುತ ತಮಟೆ ದುಡಿಯುತಿತ್ತು—
ತನುವೊಳಾದ ಬೇನೆಗಾಗಿ
ವಿಶ್ವಜೀವ ಮೂಕವಾಗಿ
ವಿಣ್ಣ ವಿಣ್ಣ ದುಡಿವ ತೆರದಿ,
ಗಾಯಗೊಂಡ ತಾಣದಿ.

## ಕೆರೆಯ ತಡಿಯಲ್ಲಿ

೧

ಹಿಮಂತದೆಳೆದಿನ ಕಳಕಳಿಸಿತ್ತು,
ಬಿಸಿಲೋ ಬೆಚ್ಚನೆ ಬಿದ್ದಿತ್ತು;
ಬಿಡುವೆಲ್ಲೆಲ್ಲಿಯು ಮೈದೋರಿತ್ತು,
ಸದ್ದೋ ಮೌನದಿ ಕೆಡೆದಿತ್ತು.

ಹೊಲದೊಳು ತೋಟದಿ ಗದ್ದೆಯ ಬಯಲೊಳು
ಅನ್ನ ಸಮೃದ್ಧಿಯ ಸಿರಿಯಿತ್ತು,
ತಿರೆಯಂದಿನ ಆ ಪ್ರಶಾಂತ ಭಾವದಿ
ಕೃತಕೃತ್ಯತೆಯಾ ಗೆಲವಿತ್ತು.

"ಕ್ಲೇಶವ ತೊರೆ ಬಾ, ಶಾಂತಿಯ ಕೊಳು ಬಾ,
ಚಿಂತೆಗು ಬಿಡುವಿರಲೀ ಹೊತ್ತು:
ಎಲ್ಲರಿಗೆಲ್ಲಕು ಬಿಡುವಿಂದೆ"ನ್ನುತ
ಕೆರೆದಡ ಪಾಂಥನ ಕರೆದಿತ್ತು.

ಕಾಯದ ಚಿಂತೆಯೆ ಕರಣದ ಚಿಂತೆಯೆ
ಕರ್ಮದ ಚಿಂತೆಯೆ, ಈವೊತ್ತು,
ಎಲ್ಲದಕೆಲ್ಲಕು ಬಿಡುವಿರಲೆನ್ನುತ
ಕುಳಿತೆನು ಶಾಂತಿಗೆ ಮನಸೆತ್ತು.

೨

ನಾಡಧಿದೈವದ ಮೃದು ನಿಃಶ್ವಾಸಕೆ
ಕೆರೆಯೆದೆ ತುಸ ತುಸ ಚಲಿಸಿತ್ತು;
ಕಿರು ಕಿರುದೆರೆಯೊಳು ಸೂರ್ಯನ ಬೆಳುನಗೆ
ಮುಕ್ಕಾಗದವೊಲು ಹಂಚಿತ್ತು.

## ಕೆರೆಯ ತಡಿಯಲ್ಲಿ

ಈಷಚ್ಚಂಚಲ ಜಲದರ್ಪಣದೊಳು
ಹರಿತಶ್ಯಾಮ ತಮಾಲತರು
ತನ್ನಂದಕೆ ತಾ ತಲೆಯುಸು ತೂಗಲು,
ಸೈ ಸೈ ಎಂದಿತು ಮೆಲ್ಲೆಲರು.

ಝುಗಿ ಝುಗಿ ಕೆಂಪಿನ ಸಿಗಿ ಸಿಗಿ ಸೀಲದ
ಹೊಳೆಹೊಳೆ ಹೊಸ್ನಿನ ತೊಡವಿನೊಲು,
ಹಕ್ಕಿಯ ಸೋಜಿಗ — ಅದೊ, ಮಿಂಚುಳ್ಳಿ! —
ಎಂತಳವಟ್ಟಿದೆ ರೆಂಬೆಯೊಳು!

ಮಲೆ ಕೆರೆ ಹೊಲ ಬನ ಬುವಿ ಬಾನೆಲ್ಲಕು
ಮನವಿಂದೊಲಿದಿದೆ — ಎಲ್ಲಕ್ಕು;
ಸೃಷ್ಟಿಯ ಶಾಂತಿಯ ತಿರುಳೆನೆ ಇರುವೀ
ಹಕ್ಕಿಗೊ — ಎಲ್ಲಕು ತುಸಮಿಕ್ಕು.

೩

ತ್ರಿಗುಣೆಯ ತ್ರಿಗುಣಗಳಿಂತೀ ಸ್ಥಾಯಿಯೊ-
ಳೊದವುತ ಶಾಂತಿಯ ಸಮೆದಿರಲು,
ಅವಳೊಳಗನು ನಾನರಿತೆನೊ ಎಂಬೊಲು
ತಿಳಿವಿನ ನೆಮ್ಮದಿ ನನಗಿರಲು;

ಸರ್ರನೆ ಬಣ್ಣದ ಮಿಂಚೊಂದೆದ್ದಿತು,
ದುಃಸ್ವಪ್ನಕೆ ದಿನ ಬೆಚ್ಚಿದೊಲು —
ಕೆರೆಯೊಳು ಮರದಡಿ ಸಪ್ಪುಳವಾಯಿತು,
ಮೌನವೆ ನಿದ್ದೆಯೊಳೆದ್ದವೊಲು!

ಮತ್ತರೆಚಣದೊಳೆ ಸುಷುಪ್ತವಾಯಿತು
ಜಾಗ್ರತ ನಿಶ್ಶಬ್ದತೆ ತಿರುಗಿ;
ಮತ್ತದೆ ತಾಣದಿ ಸುಸ್ಥಿತವಾಯಿತು
ಮರದೊಳು ಮಿಂಚುಳ್ಳಿಯು ತಿರುಗಿ.

ಆದೊಡೆ ನನ್ನೀ ಪ್ರಶಾಂತಲೋಕದೊ-
ಳೇನಾಯಿತೊ ಅದ ಪೇಳಿದನೆ —
ಕೊಕ್ಕಿನ ಪೂಸಿನ ನಸು ನಸು ನುಲಿತವೆ
ಶಾಂತಿಪ್ರಳಯವನೆಸಗಿತೆನೆ.

೪

ಇಂತೀ ತೆರದೊಳು ನೆಮ್ಮದಿಗೆಡಿಸುತ,
ನನ್ನನು ಮಾಕರಿಸುವ ತೆರದಿ,
ಮಾಟದ ಮೌನದ ನಗುವನು ನಗುವೀ
ನಿಯತಿಗೆ ತರಗುಟ್ಟಿದೆ ಭಯದಿ.

ಜೀವದ ಬೆನ್ನೊಳು ಸಾವನು ಹತ್ತಿಸಿ
ನಲ್ಮೆಯ ಬೆನ್ನೊಳು ಪೊಲ್ಲಮೆಯ
ಭಯವಾನಂದದ ನೆಳಲಂತಾಗಿಸಿ
ಕಾಡುವ ಕಠೋರನಾರಿವನು ?

"ಆನಂದದೊಳೇ ಜನಿಸಿತು ಜೀವವು
ಆನಂದದೊಳೇ ಇದರಿರವು,
ಆನಂದವನೇ ಕುರಿತೋಡುವುದಿದು
ಆನಂದದೊಳೇ ಇದರಳಿವು "—

ಈ ತೆರ ನುಡಿದವ ಗಾವಿಲನೇ ಸರಿ !
ತುಸ ಕಂಡವನಾ ವನವಾಸಿ.
ರಕ್ಕಸರಾಜ್ಯದಿ ನಲ್ಮೆಯ ಮಾತೇ-
ಕೆನ್ನುತ ಪಲ್ಕಡಿದೆನು ರೋಸಿ.

೫

ಈ ಪರಿ ನೆಮ್ಮದಿಯಾಕಡೆ ತುದಿಯಿಂ
ಸಂದೆಗದಂಜಿಕೆಯೀ ತುದಿಗೆ
ತಡೆಬಡೆದಾಡಲು ಮನ ದೆಸೆಗೆಡುತಲೆ,
ತಿಳಿವಿಲಿ ಕಗ್ಗತ್ತಲೆಯೊಳಗೆ —

ಕರ್ಮಠ ವಿಪ್ರನ ವಿಸ್ಫುಟ ವಾಣಿಯೊ-
ಳೀ ಪರಿ ಮೈಗೊಳ್ಳುತಲಿಂದು
ಸನ್ನುತ್ತರಿಸಲು ಮುಗಿಲಿಂದಿಲ್ಲಿಗೆ
ಅವತರಿಸಿತೊ ಕರುಣಾ ಸಿಂಧು—

ಎನ್ನುವ ತೆರದೊಳು ಮಂಟಪದೆಡೆಯಿಂ-
ದೊಯ್ಯನೆ ಸಾರುತ ಗಾಯನವು
ಸೋಜಿಗವೇನನು ಗೈಯಿತೊ ಗೀತಾ-
ತಾರಕಮಂತ್ರೋಚ್ಚಾರಣವು!

ಕೀಲಿಯನೇನನು ಮುಟ್ಟಿತೊ ಭಿತ್ತಿಯೊ-
ಳಾವ ಕವಾಟವ ತೆರೆಯಿಸಿತೊ,
ನೆಲೆಯನದಾವುದ ನಿಲುಕಿಸುತಾತ್ಮಗೆ
ಕಣಸದನಾವುದ ತೋರಿಸಿತೊ!

" ಕೊಲ್ಲುವುದಿದು ಎಂದಾರಿದ ತಿಳಿವರೊ
ಕೊಲ್ಲಲ್ಪಡುವುದು ಇದು ಎಂದೂ,
ಇವರಿಬ್ಬರಿಗೂ ತಿಳಿವಿನಿತಿಲ್ಲವು —
ಇದು ಕೊಲ್ಲದು, ಕೊಲ್ಲಲ್ಪಡದು.

" ಜಗವೆಲ್ಲವನಾವುದು ತುಂಬಿಹುದೋ
ಅದನರಿ — ಅಳಿವಿಲ್ಲದುದೆಂದು.
ಅವ್ಯಯವಾದಿದ ನಾಶವ ಗೈಯಲು
ಆವನಿಗಾದರುಮಳವಲ್ಲ.

" ಈತನ ಶಸ್ತ್ರಂಗಳು ಕತ್ತರಿಸವು,
ಈತನ ಸುಡಲರಿಯದು ಬೆಂಕಿ
ಈತನ ತೋಯಿಸೆ ನೀರಿಗುವಾಗದು,
ಗಾಳಿಯುವೀತನನೊಣಗಿಸದು.

" ಸಕಲ ಚರಾಚರ ಸೃಷ್ಟಿಯ ಮೊದಲನು
ಕಾಣೆವು, ಕಾಂಬೆವು ಮಧ್ಯವನು ;
ಅಂತೆಯೆ ಕಂಡರಿಯೆವು ಕೊನೆಯಿರವನು —
ದುಃಖಿಪುದೇತಕೆ ಈ ಕತಕೆ ? "

೬

ಜೀವ ಮಹಾಬ್ಧಿಯ ಸಾವಿನ ಮೊಗೆಯಿಂ,
ಆನಂದವ ನೋವಳಿಗೋಲಿಂ,
ಅಳಿಯುತ, ಇಷ್ಟೇ ಎಂಬೆಯ, ಹುಂಬಾ,
ಮಮತಾ ಮೋಹದ ಕಣ್ಣೋಲಿಂ!

ಮೀನಿನ ದೃಷ್ಟಿಯೊಳಾಯಿತು ವಿಲಯಂ,
ಹಕ್ಕಿಯ ದೃಷ್ಟಿಯೊಳಭ್ಯುದಯಂ;
ಸಮಷ್ಟಿ ಜೀವದ ದೃಷ್ಟಿಯೊಳೇನಿದು ?
ನೀನೆಂತರಿಯುವೆ ಆ ಪರಿಯಂ!

ನೋವಿಂ ನಲ್ಮೆಯು, ಸಾವಿಂ ಬಾಳ್ವೆಯು-
ನಾಗಿಪ ಧರ್ಮದ ಮರ್ಮವನು,
ಸೃಷ್ಟಿಯ ಕರ್ತನ ನಿಲುವಂ ನಿಲುಕದೆ,
ಅರಿಯಲು ಸಾಧ್ಯವೆ ಮಾನವನು ?

ಮೀನೊಳು ನೋಯಿಸಿ ಖಗದೊಳು ನಲಿಯಿಸಿ
ಇಂತೆಯೆ ದೇಹದಿ ದೇಹದೊಳು
ವಿಧ ವಿಧ ರಸಗಳನೊಸರಿಸಿ, ಪಾಕವ-
ನೇನನು ಅಡುವನೊ ಸೃಷ್ಟಿಯೊಳು!

## ಕೆರೆಯ ತಡಿಯಲ್ಲಿ

ಇತ್ತೆಡೆ ಕಾಯುತ, ಅತ್ತೆಡೆ ಕರಗುತ,
ಉತ್ತೆಡೆ ತಾಡನಕೀಡಾಗಿ,
ಕತಮರಿಯದೆ ಮಾರ್ಪಡುವುದು ಲೋಹಂ
ಯಾಂತ್ರಿಕಸಿಚ್ಛೆಗೆ ವಶವಾಗಿ.

ನೊಂದುದದಾವುದು? ನಲಿದುದದಾವುದು?
ಬಲ್ಲವರಿಗೆ ಭ್ರಮೆಯೇ ಇಲ್ಲಿ!
ಅಂತರ್ಯಾಮಿಯ ಯಂತ್ರಿಯ ನೋಟದಿ
ಮರುಗಲು ಕಾರಣವೇನಿಲ್ಲ?

ಇಂತೀ ಪರಿಯೊಳು ಪರಿತರ್ಕಿಸುತಲಿ
ಪ್ರಶಾಂತನಾದೆನು ನಾನಂದು,
ಏತಕು ಒಲಿಯದೆ ಏನನು ಹಗೆಯದೆ
ಜ್ಞಾನದ ಯೋಗದಿ ನೆಲೆನಿಂದು.

# ಋತದ ಮೊದಲ ಕಣಸು

ಸೃಷ್ಟಿಸ್ವಯಂಪ್ರಭೆಯಗುಹೆಯ ದಾರಿಗನಾಗಿ
ಚೇತನಂ ನಡೆಯುತಿರೆ, ವಿಸ್ಮಯಂಗೊಳಿಸಿತಿದ
ನೂತನದ ನಸುಕೊಂದು ಬಂದೆಡೆಯೊಳ್ ; ಅದರಿಂದ
ಸ್ಪಷ್ಟಮಂದದಕಾಯ್ತು ಅಹಮಸ್ಮಿ ಎಂಬರಿವು.

'ನಾನುಂಟು' ಎನ್ನುತಿದು ಹಿಗ್ಗಿ ಕಣ್ಮನ ತೆರೆಯ-
ಲೆನಿತು ಭಯಮಾಯ್ತದಕೆ ಇಹದ ರಚನೆಯ ಕಂಡು!
ಘೃಣೆಯುರದ ಮಿತಿಯುರದ ತದ್ಭಿನ್ನ ಬಹುವಿನೊಳು
ಏನೆಡರ ಕಂಡಿತಿದು ತನ್ನ ಬಾಳನು ನಡಸೆ!

ಇಂತು ದುಃಖಿತದೇಹಿ ತತ್ತ್ವರವಿಯುದಯವನು
ಮೊಟ್ಟಮೊದಲೀಕ್ಷಿಸುತ, ಋತದ ಶ್ರುತಿಯೊಳು ನಡೆವ
ವ್ಯಷ್ಟಿ ವಿವಿಧ ಸ್ವರಗಳುದ್ಗೀಥವಾಲಿಸುತ,
ಎಂತು ನನೆಕೊನೆವೋಯ್ತೊ ಆ ಸುಪ್ರಭಾತದೊಳು!

ಎಂತು ದನಿಗೂಡಿಸಿತೊ ಸೋಹಮೋಂ ಸೋಹಮೆಂದು
ಎಂತು ಭಯ ನೀಗಿತೋ ನಂದಮಾನಂದಮೆಂದು!

# ಕವಿ

ಯೋಜನಗಳಾಚೆಯೊಳು ಎಲ್ಲಿಯೋ ಜನಿಯಾಂತು
ಮಿಂಚಿನಣುಗಳನೇರಿ ಸಕಲ ದಿಙ್ಮಂಡಲವ
ಸಂಚರಿಸುತಂತರದಿ ಮೌನದಿಂ ಮುಡಿಯುತಿಹ
ಸೋಜಿಗದ ಗೀತವನು ಪಿಡಿದು, ಉಜ್ಜ್ವಲಗೊಳಿಸಿ,

ಶ್ರೋತೃಪಥವೈದಿಸುವ ಯಂತ್ರದೊಲು,—ಹೇ ಕವಿಯೆ,
ಬಾಳುಬಾಳುಗಳಾಚೆ ಬ್ರಹ್ಮಾಂಡ ಹೃದಯಾಂತ-
ರಾಳದೊಳು ಸಂತತಂ ಸಂಜನಿಸುವಾನಂದ-
ಮಾತೃಕೆಯೆ ತಾನಾದ, ವಿಶ್ವಕೆಲ್ಲಕು ಹರಡಿ

ವಿಕೃತಿ ಪದರಗಳಲ್ಲಿ ಮೌನವಾಗಿಹ, ಶಿವದ
ಗೀತವನು ಕರಣಗೋಚರವಾಗೆ ಸ್ಪಂದಿಸುತ
ಚೇತನರೊಳಾ ಚಿದಾನಂದವನೆ ಮರುಕೊಳಿಪ,
ಪ್ರಕೃತಿ ಶಿಲ್ಪಿಯು ಸಮೆದ ಚಿದ್ಯಂತ್ರ ನೀನಲಾ!

ಮನದ ಮೊನೆಯನು ಮಾಡು ಶಿವಸೂಚಿಯಾಗುವಂತೆ;
ಮರ್ಮವನು ಸುಡಿ, ಲೋಕ ತನ್ನ ತಾನರಿಯುವಂತೆ.

# ಸಂಧ್ಯಾ

ದಿವಸಾವಸಾನದೊಳು
ಬುವಿಯ ಸುತಿಗೆಚ್ಚರಿಸೆ
'ಮುವಸ್ಸೀಸ'ನಂದದೊಳು ಅಸ್ತಗಿರಿಯು
ರವಿಯುಡರಿ ರಂಜಿಸಿಹ-
ನವನ ಪಾವನ ಕಾಂತಿ
ಅವತರಿಸಿ ಹರಸುತಿದೆ ಅಂಜುವಿಳೆಯ.

ಇನಿಯನೊಲಿಯಲಿ ಎಂದೊ
ಮನದಾಸೆ ಸಲಲೆಂದೊ —
ಎನಗರಿಯದಾ ಹರಕೆ — ಮುಗಿಲ ಕರೆಯ
ಹೊಸಲಿನೊಳು ಸುರಕನ್ಯೆ
ಹಣತೆಯಿದ ತೇಲಿಸಿಹ-
ಳೆನುವಂತೆ ಬಾಲಶಶಿ ತೇಲುತಿಹನು.

ಸುತ್ತ ಗಿರಿಗಳೆ ಭಿತ್ತಿ,
ಹೊತ್ತಿರುವ ಬಾಂದಳವೆ
ಚಿತ್ತರದ ಗುಮ್ಮಟವು, ಬಯಲೆ ನೆಲವು ;
ಅತ್ತ ನೀರವವನವೆ
ಮೊತ್ತ ಭಕ್ತರ — ಚೋದ್ಯ! —
ಚಿತ್ತಕೆಸೆವುದು ವಿಶ್ವದೇಗುಲದೊಲು.

ಮೊಳಗುತಿದೆ ಖಗವಾದ್ಯ,
ಮಲರು ಕಂಪೊಗೆಯುತಿದೆ,
ಹೊಲದೊಳದೊ ಮಣಿದಿಹನು ಮುಸಲ ರೈತ.
ಕೊಳದೊಳಂಜಲಿ ಮುಗಿದು
ಕುಳಿತಿಹರು ಭೂಸುರರು,
ಎಲರು ಪಿಸುಗುಟ್ಟುತಿದೆ: "ಅವ ಬರುತಿಹಂ!"

ತನ್ನ ಮಂದಿರಕೀಗ
ಚೆನ್ನಿಗನು ಬರುತಿಹನು !
ಸನ್ನಿ ಇದು, ಬಾ ನೀರ, ನುತಿಗೊಡುವ ಬಾ.
ಪಿನ್ನೆಲ್ಲ ಹುಸಿಮಾಡೆ
ಮುನ್ನ ಮಂಗಳಮಾಡೆ
ಚೆನ್ನ ಅವ ಬರುತಿಹನು, ನುತಿಗೊಡುವ ಬಾ.



1316—36.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.